# ಮಾನಸಿ

ಜುಲೈ 2005 ತಿಂಗಳ ಪತ್ರಿಕೆ

**ಮಾನಸ** ತಿಂಗಳ ಪತ್ರಿಕೆ ಜುಲೈ 2005
ಸಂಪುಟ : 20 ಸಂಚಿಕೆ : 7



**ವಿಳಾಸ :**
**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :**

| | |
|---|---|
| ಬಿಡಿಪ್ರತಿ | 10-00 ರೂ. |
| ವಾರ್ಷಿಕ ಚಂದಾ | 100-00 ರೂ. |
| ಸಂಸ್ಥೆಗಳಿಗೆ | 150-00 ರೂ. |

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ನ್ಯಾಯ ನಿಧಾನವಾಗಿ ಸಿಕ್ಕಬಹುದು, ಆದರೆ ನ್ಯಾಯವನ್ನೇ ತಿರಸ್ಕರಿಸಲಾಗುವುದಿಲ್ಲ ಎಂಬ ಸತ್ಯವನ್ನು ದೆಹಲಿಯ ಉಚ್ಚ ನ್ಯಾಯಾಲಯದ ತೀರ್ಪು ಎತ್ತಿ ಹಿಡಿದಿದೆ. ಈ ತೀರ್ಪಿನ ಪ್ರಕಾರ ದೆಹಲಿಯ ಸೂಪರ್ ಬಜಾರ್ ಸಹಕಾರಿ ಮಳಿಗೆಯಲ್ಲಿನ ಮಹಿಳೆಯರ ಸಮಾನ ಕೆಲಸಕ್ಕೆ ಸಮಾನ ವೇತನ ದೊರೆತಿದೆ.

21 ವರ್ಷದ ಹಿಂದೆ ಈ ದೆಹಲಿ ಸೂಪರ್ ಬಜಾರ್‌ನ ಸಹಕಾರಿ ಮಳಿಗೆಯಲ್ಲಿನ ಮಹಿಳೆಯರು ಅವರ ಅಧಿಕಾರಿಯ ವಿರುದ್ಧ ಪಬ್ಲಿಕ್ ಇಂಟರೆಸ್ಟ್ ಲಿಟಿಗೇಶನ್ ಹಾಕಿದ್ದರು. ಪುರುಷ ಸಹೋದ್ಯೋಗಿಗಳಷ್ಟೇ ಸಮಾನವಾದ ಕೆಲಸ ಮಾಡಿದರೂ ಕೂಡಾ ಅವರಿಗೆ ಕಡಿಮೆ ವೇತನ ನೀಡಲಾಗುತ್ತಿತ್ತು. 2005 ಮೇ ತಿಂಗಳ ಅಂತ್ಯದಲ್ಲಿ ಉಚ್ಚ ನ್ಯಾಯಾಲಯ ಮಹಿಳೆಯರ ಪರವಾಗಿ ತೀರ್ಪು ನೀಡಿ ಸಮಾನ ಕೆಲಸಕ್ಕೆ ಸಮಾನ ವೇತನ ನೀಡುವಂತೆ ಆದೇಶಿಸಿದೆ. ಈ ತೀರ್ಪು ಲಿಂಗಾಧಾರಿತ ಸಮಾನ ವೇತನದ ಹೋರಾಟಕ್ಕೆ ದಾರಿದೀಪವಾಗಿದೆ. ಈ ತೀರ್ಪು ನೀಡಲು ಉಚ್ಚ ನ್ಯಾಯಾಲಯ 2 ದಶಕಷ್ಟು ಸಮಯ ತೆಗೆದುಕೊಂಡಿದ್ದಾಗ್ಯೂ ಕೂಡಾ ಕೊನೆಗೆ ತೀರ್ಪು ಮಹಿಳೆಯರ ಪರವಾಗಿ ಇರುವುದರಿಂದ ಮಹಿಳಾ ಹೋರಾಟಕ್ಕೆ ಇದೊಂದು ಜಯದ ಮೆಟ್ಟಿಲೇ ಆಗಿದೆ.

1779ರಲ್ಲಿಯೇ ಜಾರಿಗೆ ಬಂದಿರುವ 'ಈಕ್ವಲ್ ರೆಮ್ಯುನರೇಶನ್ ಆ್ಯಕ್ಟ್' ಇಂದಿಗೂ ಕೂಡಾ ಪೇಪರ್ ಮೇಲೆ ಮಾತ್ರ ಇದೆ. ಸಣ್ಣ ವ್ಯವಹಾರಗಳಿಂದ ಹಿಡಿದು ದೊಡ್ಡ ದೊಡ್ಡ ಸಂಘಟನೆಗಳಲ್ಲಿ, ಪತ್ರಿಕೋದ್ಯಮವೂ ಸೇರಿದಂತೆ ಮಹಿಳೆಯರನ್ನು ಒಳ್ಳೆಯ ಕೆಲಸಗಾರರೆಂದು ಪ್ರಶಂಸಿಸಲಾಗುತ್ತದೆ. ಅನೇಕಾನೇಕ ಕೆಲಸಗಳನ್ನೂ ಸಹ ಅವರಿಗೆ ನೀಡಲಾಗುತ್ತದೆ. ಕಡಿಮೆ ಸಂಬಳದಲ್ಲೂ ಇವರು ಅತ್ಯುತ್ತಮ ಕೆಲಸ ಮಾಡುವರು ಎಂಬ ಸಂಗತಿಯನ್ನು ಎಲ್ಲಾ ಕೈಗಾರಿಕೋದ್ಯಮಗಳೂ ತಮ್ಮ ಅನುಕೂಲಕ್ಕೆ ತಕ್ಕಂತೆ ಶೋಷಿಸುತ್ತವೆ.

ಈ ರೀತಿಯ ಲಿಂಗ ಅಸಮಾನತೆಯ ವೇತನಕ್ಕೆ ಮೂಲ ಕಾರಣ ಪುರುಷ ಕುಟುಂಬದ ಆದಾಯ ತರುವ ಯಜಮಾನ ಎಂಬ ನಂಬಿಕೆ, ಮಹಿಳೆಯ ದುಡಿತವನ್ನು ಪೂರಕ ಸಂಬಳ ಎಂದೇ ಇಂದೂ ನಂಬಲಾಗಿದೆ. ಹೆರಿಗೆ ರಜ, ಕುಟುಂಬದ ಕಾರಣಗಳಿಗಾಗಿ ರಜೆ ತೆಗೆದುಕೊಳ್ಳುವ ಮಹಿಳೆಯರ ಮೇಲೆ ಅವಲಂಬಿತರಾಗಿರುವುದು ಸಾಧ್ಯವಿಲ್ಲ ಎನ್ನುವ ನಂಬಿಕೆ ಕೂಡಾ ಅಸಮಾನ ವೇತನಕ್ಕೆ ಕಾರಣವಾದ ಅಂಶವಾಗಿದೆ.

ಈ'ಸಮಾನ ವೇತನ ಕಾಯಿದೆ' ಜಾರಿಯಲ್ಲಿ ಇಲ್ಲದಿರುವುದೇ ಮಹಿಳೆಯರ ಶೋಷಣೆಗೆ ನೇರವಾಗಿ ಕಾರಣವಾಗುತ್ತಿದೆ. ಲಿಂಗ ಅಸಮಾನತೆಯ ದಿಕ್ಕಿನ ರ್‍ಯಾಂಕಿಂಗ್‌ನಲ್ಲಿ ಇಂಡಿಯ ಇಂದು 53 ನೆಯ ಸ್ಥಾನದಲ್ಲಿ ಇದೆ. 'ಶಕ್ತಿ' ದೇವತೆಯನ್ನು ಆರಾಧಿಸುವ ರಾಷ್ಟ್ರದಲ್ಲಿ ಮಹಿಳೆಯರಿಗೆ ತೋರಿಸುತ್ತಿರುವ ಅಗೌರವ, ಅಸಮಾನತೆ ದಿಗ್ಭ್ರಮೆ ಹುಟ್ಟಿಸುವಂತಹದು. ಸಮಾನ ಕೆಲಸಕ್ಕೆ ಸಮಾನ ವೇತನದ ಬಗ್ಗೆ ಅರಿವು, ಜಾಗೃತಿ, ಹೋರಾಟ ನಡೆಸದಿದ್ದರೆ ಈ ಕಾಯಿದೆ ಕೇವಲ ಒಂದು ಘೋಷಣೆಯಾಗಿ ಮಾತ್ರ ಉಳಿಯುತ್ತದೆ.

# ಸಮಾನತೆಯಲ್ಲಿರುವ ಅಧಿಕಾರ ಅಧೀನತೆಯಲ್ಲಿರುವ ಅಧಿಕಾರಕ್ಕಿಂತ ದೊಡ್ಡದು

ಅನಾದಿಕಾಲದಿಂದಲೂ ಮನುಷ್ಯ ತನಗಿಂತ ಬಲಹೀನನಾದವನನ್ನು ತನ್ನ ಅಧೀನದಲ್ಲಿಟ್ಟುಕೊಂಡಿದ್ದ. ಅವರನ್ನು ಶೋಷಿಸುತ್ತಿದ್ದ. ಅವರನ್ನು ಉಪಯೋಗಿಸಿ ಕೊಳ್ಳುತ್ತಿದ್ದ. ಅವನನ್ನು ಅವಮಾನಕ್ಕೀಡು ಮಾಡಿತ್ತಿದ್ದ. ಯುದ್ಧಗಳಲ್ಲಿ ಜಯಗಳಿಸುವುದರ ಮೂಲಕ ಅವನ ಅಧಿಕಾರ ವಿಸ್ತಾರಗೊಳ್ಳುತ್ತಿತ್ತು. ಸಾಮ್ರಾಜ್ಯಶಾಹಿ ಬೆಳವಣಿಗೆ ಈ ರೀತಿಯ ಅಧಿಕಾರ ಮೂಲವಾಗಿತ್ತು. ಗುಲಾಮಗಿರಿಯು ಸಹ ದಬ್ಬಾಳಿಕೆಯ ಒಂದು ವಿಧವಾಗಿತ್ತು . ಒಬ್ಬ ವ್ಯಕ್ತಿಯು ತನ್ನನ್ನು ಇತರರಿಗಿಂತ ಶ್ರೇಷ್ಠ ಎಂದು ಭಾವಿಸಿದಾಗ ಸಹಜವಾಗಿಯೇ ಇನ್ನೊಂದು ವರ್ಗ ಕೀಳರಿಮೆಯಿಂದ ನರಳ ಬೇಕಾಗುತ್ತದೆ. ಇದು ಬಣ್ಣ, ಧರ್ಮ, ಶ್ರೀಮಂತಿಕೆ, ಹೆಣ್ಣೆಂಬ ತಾರತಮ್ಯ ಆಧಾರದ ಮೇಲೆ ಈ ವ್ಯತ್ಯಾಸವನ್ನು ಕಾಣಬಹುದು. ಇತಿಹಾಸ ಪೂರ್ತಿ ಇಂತಹ ನಿದರ್ಶನಗಳಿಂದ ತುಂಬಿದೆ. ಕಪ್ಪು ಜನರು ಅನುಭವಿಸಿದ ಅವಮಾನ, ಯುರೋಪ್‌ನಲ್ಲಿ ಜ್ಯೂಗಳು ಅನುಭವಿಸಿದ ಹಿಂಸೆ, ಭಾರತದ ಮುಖ್ಯವಾಹಿನಿಯಿಂದ ಬೇರ್ಪಟ್ಟ ದಲಿತರು, ಆಫ್ರಿಕದಲ್ಲಿನ ಕಪ್ಪು ಜನರ ಶೋಷಣೆ, ಇವೆಲ್ಲಾ ಇತಿಹಾಸದಲ್ಲಿ ಅಡಗಿವೆ.

ಅನಾದಿಕಾಲದಿಂದಲೂ ಪುರುಷ ಮಹಿಳೆಯನ್ನು ಬಂಧನದಲ್ಲಿರಿಸಿದ್ದ . ನಂತರ ಸಮಾಜದ ಇತರ ವ್ಯವಸ್ಥೆಗಳನ್ನು ಬೆಳೆಸಿದ, ಸಾಮಾಜಿಕ, ಆರ್ಥಿಕ ಸಾಂಸ್ಕೃತಿಕ ಕಾನೂನು ಮುಂತಾದ ವ್ಯವಸ್ಥೆಗಳನ್ನು ತನ್ನ ಹಿರಿಮೆಯನ್ನು ಬಳಸಲು ಹಾಗೂ ಉಳಿಸಲು ಬೆಳೆಸಿದ. ಇದರ ಇನ್ನೊಂದು ಮುಖವೇ ಸ್ತ್ರೀಯರ ಹಿಂದುಳಿದ ಸ್ಥಾನಮಾನ - ಮುಂದು ವರಿಯುತ್ತಲೇ ಬಂದಿದೆ. ಇವಳು ಮಾನಸಿಕವಾಗಿ, ಭಾವನಾತ್ಮಕವಾಗಿ ದೈಹಿಕವಾಗಿ ಎಲ್ಲಾ ರೀತಿಯಲ್ಲೂ ಶೋಷಣೆಗೆ ಒಳಗಾಗಿದ್ದಾಳೆ. ಈ ರೀತಿ ಶೋಷಣೆಗೆ ಒಳಗಾದ ಮಹಿಳೆ ದುರ್ಬಲಳಾಗುತ್ತಾಳೆ. ಅವಳಲ್ಲಿ ಆತ್ಮ ವಿಶ್ವಾಸ ಇಲ್ಲದಾಗುತ್ತದೆ. ಆಕೆ ಅಭದ್ರತೆಯಿಂದ ನರಳುತ್ತಾಳೆ. ಹೆದರುವುದು ಆಕೆಯ ಪ್ರವೃತ್ತಿಯಾಗುತ್ತದೆ. ಇದರಿಂದಾಗಿ ಆಕೆ ಸದಾ ಬೇರೆಯವರನ್ನು ಅವಲಂಬಿಸಿರ ಬೇಕಾಗುತ್ತದೆ..

ಈ ಹಿನ್ನಲೆಯಲ್ಲಿ ಜನಸಾಮಾನ್ಯ ಮಹಿಳೆಯರನ್ನು ನೋಡಿದಾಗ, ಅವರ ಬಗ್ಗೆಯೇ ಅವರಿಗೆ ನಂಬಿಕೆ ಇರುವುದಿಲ್ಲ. ಅವರಿಗೆ ಸ್ವಂತಿಕೆ ಇರುವುದಿಲ್ಲ . ಅವರ ನಿರ್ಧಾರದಿಂದ ಅವರು ಏನು ಮಾಡಲು ಮುಂದೆ ಬರುವುದಿಲ್ಲ. ಸದಾ ನಗುತ್ತಿರುತ್ತಾಳೆ. ಅಥವಾ ಮಾತನಾಡುವಾಗ ತಲೆಕೆರೆಯುತ್ತಾಳೆ. ಹೆದರಿಕೆಯಿಂದ ನಡುಗುತ್ತಾಳೆ. ಅಥವಾ ಬೇರೆಯವರ ಹಿಂದೆ ಬಚ್ಚಿಟ್ಟು ಕೊಳ್ಳುತ್ತಾಳೆ. ಇದು ಅವರಲ್ಲಿ ಸ್ವಂತಿಕೆ, ಸ್ವಾಭಿಮಾನ, ಸ್ವಗೌರವದ, ಕೊರತೆಯನ್ನು ಎತ್ತಿ ತೋರಿಸುತ್ತದೆ. ಮಹಿಳೆಯರು ವಿಶ್ವಾಸದಿಂದ, ನಂಬಿಕೆಯ ಧ್ವನಿಯಲ್ಲಿ ಮಾತನಾಡುವುದಿಲ್ಲ. ಜೋರಾಗಿ ಸಹ ಮಾತನಾಡುವುದಿಲ್ಲ. ಗಟ್ಟಿಯಾದ ಹೆಜ್ಜೆಯನ್ನು ಸಹ ಇಡುವುದಿಲ್ಲ. ಹೆದರಿಕೆ ಹಾಗೂ ಅಭದ್ರತೆ ಅವರ ನಿರಂತರವಾದ ಸಂಗಾತಿಗಳು.

ಮಹಿಳೆಯರ ಶೋಷಣೆಯ ಸೂಚನೆಗಳೆಂದರೆ ಅವಳ ಹಕ್ಕುಭಾಧ್ಯತೆಗಳಲ್ಲಿ ಅವಳಿಗಾದ ವಂಚನೆ, ಆಕೆ ವ್ಯವಸಾಯ ಮಾಡಿದರೂ ಆಕೆಗೆ ಭೂಮಿಇಲ್ಲ. ಆಕೆಯ ದುಡಿಯುತ್ತಿದ್ದರೂ ಆಕೆಗೆ ಆಸ್ತಿಯಲ್ಲಿ ಹಕ್ಕಿಲ್ಲ. ಆಕೆ ಆಕೆಯ ಅಣ್ಣಂದಿರಂತೆ ತಂದೆಗೆ ಜನಿಸಿದ್ದರೂ ಆಕೆಗೆ ತಂದೆಯ ಆಸ್ತಿಯಲ್ಲಿ ಭಾಗವಿಲ್ಲ.

ಅವಳಿಗೆ ಸಾಲ ಸೌಲಭ್ಯ ಸಿಗುವುದಿಲ್ಲ. ಆಕೆಗೆ ವಿಧ್ಯಾಭ್ಯಾಸವನ್ನು ಸಹ ನೀಡಲಾಗುವುದಿಲ್ಲ. ಅವಳು ನ್ಯಾಯದಿಂದ ವಂಚಿತಳಾಗಿದ್ದಾಳೆ. ಅವಳಿಗೆ ರಾಜಕೀಯವಾಗಿಯು ಯಾವ ಧ್ವನಿಯೂ ಇಲ್ಲ. ಅಥವಾ ಆರ್ಥಿಕವಾದ ಬಲವೂ ಆಕೆಗೆ ಇಲ್ಲ.

ಮಹಿಳೆ ತುಂಬಾ ದುರ್ಬಳಾದಾಗ, ಶಕ್ತಿಹೀನಳಾದಾಗ, ಅವಳ ಮೇಲಿನ ಹಿಂಸೆ ಮುಂದುವರಿಯುತ್ತದೆ. ಜಗತ್ತಿನಾದ್ಯಂತ ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆ ಸಾಂಕ್ರಮಿಕವಾಗಿ ಹಬ್ಬುತ್ತಿದೆ.

ಹೀಗಿದ್ದರೂ ಈ ಹಿಂಸೆಯ ವಿರುದ್ಧ ಹೋರಾಟ ನಡೆಯುತ್ತಲೇ ಇದೆ. ಮನೋಭಾವಗಳು,ಧೋರಣೆಗಳು ಸುಲಭವಾಗಿ ಬದಲಾಗುವುದಿಲ್ಲ. ಪುರುಷರೂ ಸಹ ತಮ್ಮ ಅಧಿಕಾರವನ್ನು ಬಿಟ್ಟು ಕೊಡುವುದಿಲ್ಲ. ಪ್ರಜಾತಂತ್ರವನ್ನು ಬಯಸುವುದು ಕಠಿಣವಾದುದೇ, ಇದು ಮನೆಯಿಂದ ಪ್ರಾರಂಭವಾಗಬೇಕು. ತಾಯಿ, ತಂಗಿ, ಅಕ್ಕ, ಹೆಂಡತಿ, ಮಗಳು ಇವರಿಂದ ಪ್ರಾರಂಭವಾಗಬೇಕು. ಬದಲಾವಣೆ, ಮೂರು ಹಂತದಲ್ಲಿ ನಡೆಯಲೇಬೇಕು. ವಿದ್ಯಾಭ್ಯಾಸ, ಸ್ವಾತಂತ್ರ, ಸ್ವಶಕ್ತಿ, ಸಮಾಜ ನಮ್ಮ ಹೃದಯ ಹಾಗೂ ಮನಸ್ಸಿನ ಮೇಲೆ ಹೇರಿದ ಬಂಧನದ ಬಿಡುಗಡೆಗೆ ನೆರವಾಗುತ್ತದೆ. ಈ ಬಿಡುಗಡೆ, ನಮ್ಮ ವ್ಯಕ್ತಿತ್ವದ ಬೆಳವಣಿಗೆಗೆ ಪೂರಕವಾಗಿ ನಮ್ಮನ್ನು ಬಲಪಡಿಸುತ್ತದೆ.

ಮಹಿಳೆಯರ ಸ್ಥಾನಮಾನದಲ್ಲಿ ಕಂಡು ಬರುವ ಬದಲಾವಣೆಯನ್ನು ನಾವು ಮುಖ್ಯವಾಗಿ ಮನೆಯಲ್ಲಿ ಕಾಣಬಹುದು. ನಾವು ತಾಯಿ ಮತ್ತು ತಂದೆಯರು ನಮ್ಮ ಮಕ್ಕಳು ದೃಡತೆ, ವಿಶ್ವಾಸವನ್ನು ಬೆಳೆಸಿಕೊಳ್ಳುವಂತೆ ಬೆಳಸಬೇಕು.

ಅವರಲ್ಲಿ ಸ್ವತಂತ್ರ ಮನೋಭಾವನೆಯನ್ನು ಬೆಳೆಯುವಂತೆ ಮಾಡಬೇಕು. ಅವರ ಬಗ್ಗೆ ಅತಿಯಾದ ಕಾಳಜಿ ಹಾಗೂ ರಕ್ಷಣಾತ್ಮಕ ಮನೋಭಾವನೆಯನ್ನು ಹೊಂದಿರುವುದು ಅವರಲ್ಲಿನ ಆತ್ಮವಿಶ್ವಾಸವನ್ನು ನಾಶಪಡಿಸುತ್ತದೆ. ಕೇವಲ, ಮನೆಗೆ ಸ್ಕೂಲು ಹಾಗೂ ಕಾಲೇಜಿಗೆ ಸೀಮಿತ ಗೊಳಿಸುವುದರಿಂದ, ಬದುಕಲು ಅಗತ್ಯವಾದ ಕುಶಲತೆಯನ್ನೂ ಕಲಿಸಲಾಗುವುದಿಲ್ಲ.

ಬಹುಮುಖ್ಯವಾದ ಸಂಗತಿಯೆಂದರೆ ನಮ್ಮ ಹೆಣ್ಣು ಮಕ್ಕಳಿಗೆ ತಮ್ಮನ್ನು ತಾವು ಸಮರ್ಥಿಸಿಕೊಳ್ಳುವುದನ್ನು ಕಲಿಸಬೇಕು. ಕೇವಲ ಎಲ್ಲವನ್ನು ವಿದೇಯತೆಯಿಂದ ತಲೆಯಾಡಿಸದೇ, 'ಇಲ್ಲ' ಎಂದು ಹೇಳುವುದನ್ನು ಹೆಣ್ಣು ಮಕ್ಕಳು ಕಲಿಯಬೇಕಾಗಿದೆ. ಅವರು 'ಇಲ್ಲ'ವೆಂದು ಹೇಳಲು ಪಡೆಯುವ ಬಲ, ಅವರು ಹಿಂಸೆ, ಹಾಗೂ ಅನ್ಯಾಯದ ವಿರುದ್ಧ ಹೋರಾಡುವ ಶಕ್ತಿಯನ್ನು ನೀಡುತ್ತದೆ. ಸ್ತ್ರೀಯರಿಗೆ ಈ ಶಕ್ತಿಯಿಲ್ಲದ ಕಾರಣದಿಂದಾಗಿ ಅವರು ಹಿಂಸೆಗೆ, ಒಳಗಾಗುತ್ತಾರೆ, ಮಾನಸಿಕವಾದ ಹಾಗೂ ದೈಹಿಕವಾದ ದೌರ್ಜನ್ಯಕ್ಕೆ ತುತ್ತಾಗುತ್ತಾರೆ. ಸಾವಿಗೊಳಗಾಗುತ್ತಾರೆ.

ನಮ್ಮ ಪ್ರಯತ್ನಗಳಿಗೆ ನಾವೇ ಮೆಚ್ಚುಗೆ, ಸೂಚಿಸಬೇಕಾಗುತ್ತದೆ.. ಹೆಮ್ಮೆ ಪಡಬೇಕಾಗುತ್ತದೆ. ಆತ್ಮ ವಿಶ್ವಾಸವನ್ನು ಬೆಳಸಿಕೊಳ್ಳಬೇಕಾಗುತ್ತದೆ. ಬೇರೆ ಯಾರೂ ಈ ಕೆಲಸವನ್ನು ಮಾಡುವುದಿಲ್ಲ. ನಾವು ಮನುಷ್ಯ ಜೀವಿಗಳಾಗಿರುವುದರಿಂದ ನಮ್ಮ ಹಕ್ಕು ಭಾದ್ಯತೆಗಳನ್ನು ನಾವೇ ಪ್ರತಿಪಾದಿಸಬೇಕಾಗುತ್ತದೆ. ಎರಡನೇ ದರ್ಜೆಯ ವ್ಯಕ್ತಿಗಳಲ್ಲವೆಂದು, ನಾವು ಸಾರಿ ಸಾರಿ ಹೇಳಬೇಕಾಗಿದೆ. ನಮಗೂ ಪುರುಷರ ಬೆಂಬಲದ ಅಗತ್ಯವಿದೆ. ಅವರು ನಮ್ಮ ಹೋರಾಟಕ್ಕೆ ಜೊತೆಗೂಡದಿದ್ದಾಗ ನಾವು ಹೋರಾಟವನ್ನು ಬಿಟ್ಟು ಬಿಡಬೇಕೆಂದೆಲ್ಲ. ಅವರಿಲ್ಲದೇ ನಮ್ಮ ಹೋರಾಟವನ್ನು ನಾವು ಮುಂದುವರಿಸಿ ಕೊಂಡು ಹೋಗಬೇಕಾಗಿದೆ.

ನಿಸ್ಸಂಶಯವಾಗಿ ನಮ್ಮ ಈ ಹೋರಾಟ ವಿಭಿನ್ನವಾದುದು. ಪುರುಷರ ಬೆಂಬಲವಿಲ್ಲದೆ, ಗುರಿಯನ್ನು ತಲುಪಲು ದೀರ್ಘವಾದ ಸಮಯವನ್ನು ತೆಗೆದುಕೊಳ್ಳುತ್ತದೆ. ಇದನ್ನು ನಾವು ಸಾಧಿಸಿಯೇ ಸಾಧಿಸುತ್ತೇವೆಂದು ನಮ್ಮ ಪುರುಷರಿಗೆ ಹೇಳೋಣ. ಅನಾದಿಕಾಲದಿಂದ ಸ್ತ್ರೀಯರಿಗಾದ ಅನ್ಯಾಯವನ್ನು ಸರಿಪಡಿಸುವ ಒಂದು ಅವಕಾಶದಿಂದ ಅವರು ವಂಚಿತರಾಗಿರುವುದಕ್ಕೆ ನಮಗೆ ಬೇಸರವಿದೆ. ಆದುದರಿಂದ ಯಾವುದೇ ಅಹಂ ಇಲ್ಲದೆ ನಮ್ಮ ಹಿಂದೆ ಬನ್ನಿ. ಜೊತೆಗೂಡಿ, ಈ ಪ್ರಕ್ರಿಯೆಯಲ್ಲಿ ನೀವೂ ಸಹ ಸ್ವತಂತ್ರರಾಗುವಿರಿ ಹಾಗೂ ಸಶಕ್ತರಾಗುವಿರಿ. ಸಮಾನತೆಯಲ್ಲಿರುವ ಅಧಿಕಾರ ಅಧೀನತೆಯ ಅಧಿಕಾರಕ್ಕಿಂತ ದೊಡ್ಡದು.

**ಅಖಿಲೇಶ್ವರಿ.**

# ಮಾರ್ವಾಡಿ ಅನುಭವಗಳಿಗೆ ಧ್ವನಿಯಾದ ಲೇಖಕಿ - ಅಲ್ಕಾ ಸರೌಗಿ'

ಅಲ್ಕಾ ಸರೌಗಿ - ಕಲ್ಕತ್ತಾದಲ್ಲಿ ಹುಟ್ಟಿ ಬೆಳೆದವರು. ಈ ಲೇಖಕಿ ಮೂರು ಕಾದಂಬರಿಗಳನ್ನಲ್ಲದೇ, ಎರೆಡು ಸಣ್ಣ ಕಥಾ ಸಂಕಲನಗಳನ್ನು ಬರೆದು ಪ್ರಕಟಿಸಿದ್ದಾರೆ. ಹಿಂದಿ ಸಾಹಿತ್ಯದಲ್ಲಿ ಈಕೆ ಸೃಜನಾತ್ಮಕ ಲೇಖಕಿ ಎಂದು ಹೆಸರು ಮಾಡಿದ್ದಾರೆ. ಆಕೆಯ ಪ್ರಥಮ ಕಾದಂಬರಿ 'ಕಾಲಿ ಕಥಾ ವಯಾ ಬೈ ಪಾಸ್' (1998) ಪ್ರಕಟವಾದಾಗಿನಿಂದ ಈಕೆ ಹಿಂದಿ ಸಾಹಿತ್ಯದಲ್ಲಿ ಒಂದು ಗುರುತರವಾದ ಸ್ಥಾನ ಪಡೆದಿದ್ದಾರೆ. ಈ ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಂದಿರುವುದಲ್ಲದೇ ಯುವ ಬರಹಗಾರರ ಅಸಾಮಾನ್ಯ ಕೃತಿಗೆ ಸಲ್ಲುವ ಶ್ರೀಕಾಂತವರ್ಮ ಪುರಸ್ಕಾರ ಸಹ ದೊರೆತಿದೆ. ಈ ಪುಸ್ತಕ ಇಂಗ್ಲೀಷ್, ಫ್ರೆಂಚ್ ಹಾಗೂ ಇಟ್ಯಾಲಿಯನ್ ಭಾಷೆಗೂ ಸಹ ಅನುವಾದಗೊಂಡಿದೆ.

ಈಕೆಯ ಎಲ್ಲಾ ಕಾದಂಬರಿಗಳಲ್ಲಿ ಕಲ್ಕತ್ತಾ ನಗರ ಕೇಂದ್ರೀಕೃತವಾಗಿದ್ದರೆ, ಇಲ್ಲಿ ನಾಯಕ, ನಾಯಕಿಯರು ಮಾರವಾಡಿ ಸಮುದಾಯದ ಹಿನ್ನಲೆ ಹೊಂದಿದವರಾಗಿರುತ್ತಾರೆ, ರಾಜಸ್ಥಾನದ ಮರುಭೂಮಿಯಿಂದ ಬಂಗಾಳಕ್ಕೆ ವಲಸೆ ಬಂದ ಜನರ ಕಥೆಗಳು ಲೇಖಕಿಗೆ ಹೆಚ್ಚು ಆಸಕ್ತಿ ಹುಟ್ಟಿಸಿದ ಅಂಶ ಎಂಬುದು ವ್ಯಕ್ತವಾಗುತ್ತದೆ. ಇವರ ಎರಡನೆಯ ಕೃತಿ 'ಶೇಷ್ ಕಾದಂಬರಿ', ಮೂರನೆಯದು "ಕೊಯಿ ಬಾತ್ ನಹಿನ್".

ಇವರ ಎರೆಡು ಕಥಾಸಂಕಲನಗಳು 'ಕಹಾನಿ ಕಿ ತಲಾಷ್ ಮೈನ್' ಹಾಗೂ 'ದೂಸರೀ ಕಹಾನಿ'. ಇವರು ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ಹಿಂದಿಯಲ್ಲಿ ಎಂ.ಎ. ಮಾಡಿರುವುದಲ್ಲದೇ ರಘುವೀರ್ ಸಹಾಯ್ ಅವರ ಕಾವ್ಯ ಕುರಿತು ಪಿ.ಎಚ್.ಡಿ. ಮಾಡಿದ್ದಾರೆ. ಆಕೆಗೆ ಇಬ್ಬರು ಮಕ್ಕಳು.

ಕಲ್ಕತ್ತಾದ ಅವಿಭಕ್ತ ಕುಟುಂಬದ ಸದಸ್ಯೆ ಈಕೆ.

ಈಕೆಯ 'ಕಾಲಿ ಕಥಾ ವಯಾ ಬೈ ಪಾಸ್' ಕಾದಂಬರಿಯ ನಾಯಕ 70 ವರ್ಷದ ಒಬ್ಬ ಜಯಪ್ರದನಾಗಿರುವ ಬಿಸಿನೆಸ್ ಮ್ಯಾನ್. ಹೃದಯದ ಸರ್ಜರಿ ಆದ ಮೇಲೆ ಆತನ ನಡೆ-ನುಡಿಗಳಲ್ಲಿ ಬಹಳ ವ್ಯತ್ಯಾಸವಾಗುತ್ತದೆ. ಅವನೊಬ್ಬ ಬದಲಾದ ವ್ಯಕ್ತಿಯಾಗುತ್ತಾನೆ. ಕಲ್ಕತ್ತಾದ ಬೀದಿಗಳಲ್ಲಿ ತಿರುಗುತ್ತಾ, ಆಗಾಗ್ಗೆ ಏನೇನನ್ನೋ ನೆನಪಿಸಿ ಕೊಳ್ಳುತ್ತಾ ಹೋಗುವ ಹಂತದಲ್ಲಿ ಕಥಾ ನಿರೂಪಣೆ ವರ್ತಮಾನ ಭೂತಗಳ ನಡುವೆ ಚಲಿಸುತ್ತದೆ. ಹೀಗೇ ನಾಯಕ ಒಬ್ಬ ವ್ಯಕ್ತಿಯ, ಒಂದು ಕುಟುಂಬದ, ಒಂದು ಸಮುದಾಯದ, ಒಂದು ಪಟ್ಟಣದ ಹಾಗೂ ಒಂದು ರಾಷ್ಟ್ರದ ಇತಿಹಾಸವನ್ನು ಶೋಧಿಸುತ್ತಾ ಹೋಗುತ್ತಾನೆ. ಕೊನೆಯ ಪುಟದವರೆಗೆ ಈ ಕಾದಂಬರಿ ಸಮ್ಮೋಹನಗೊಳಿಸಿದಂತೆ ಓದಿಸಿಕೊಂಡು ಹೋಗುತ್ತದೆ.

'ಕಾಲಿಕಥಾ' ಎಂಬುದು ಕಲ್ಕತ್ತಾಗೆ ಉದ್ದೇಶಿಸಿ ಹೇಳಿರುವಂತಹದು. ಕಥಾ ಎಂಬುದು ಕಲಿಯುಗದ ಕಥೆ ಕೂಡಾ ಆಗಿದೆ. 'ಬೈ ಪಾಸ್' ಎಂಬುದು ಕಲಿಯುಗದಲ್ಲಿ ಜನರು ತೆಗೆದುಕೊಳ್ಳುವ 'ಶಾರ್ಟ್ ಕಟ್' ಕೂಡಾ ಆಗಿರಬಹುದು. ಹಾಗೆಯೇ ನಾಯಕನಿಗೆ ನಡೆಯುವ ಆಪರೇಷನ್ ಕೂಡಾ ಆಗಿದೆ.

ಈ ಕಾದಂಬರಿ ಬರೆಯುವಾಗ ಲೇಖಕಿಗೆ ತಾವೊಂದು ಮಹತ್ತರವಾದ ಕೆಲಸದಲ್ಲಿ ತೊಡಗಿರುವ ಭಾವನೆ ಇತ್ತು. ಈ ಕಾದಂಬರಿ ಬರೆಯಲು ಅವರು ನಾಲ್ಕು ತಿಂಗಳು ತೆಗೆದುಕೊಂಡಿದ್ದರೂ ಕೂಡಾ ಇದಕ್ಕಿಂತ ಮುಂಚೆ ಕೂಡಾ ಈ ಕಾದಂಬರಿಯ ವಸ್ತು ಅವರನ್ನು ತೀವ್ರವಾಗಿ ಆವರಿಸಿತ್ತು. ಈ ಕಾದಂಬರಿ ಬರೆಯುವ ಮುಂಚೆ ಲೇಖಕಿ ಸಾಕಷ್ಟು ಸಂಶೋಧನೆ ನಡೆಸಿರಬೇಕೆಂದು ಬಹಳಷ್ಟು ಮಂದಿ ಊಹಿಸುತ್ತಾರೆ. ಆದರೆ ಆಕೆ ಆಯ್ದುಕೊಂಡ ಕಾದಂಬರಿಯ ವಸ್ತು , ಘಟನೆ ಎಲ್ಲವೂ ಆಕೆಯ ಬದುಕಿನ ಭಾಗಗಳಾಗಿದ್ದವುಗಳೇ ಆಗಿವೆ. ಇವರು ಬೆಳೆದದ್ದು ಮಾರವಾಡಿ ಸಮುದಾಯದಲ್ಲಿ. ಬಾಲ್ಯದಿಂದಲೇ ಲೇಖಕಿಯ ಕ್ಯಾಮರಾ ಕಣ್ಣುಗಳು ಗ್ರಹಿಸಿ, ಸುಪ್ತ ಪ್ರಜ್ಞೆಯಲ್ಲಿ ದಾಖಲಾದ ಹಲವಾರು ಜೀವನದ್ರವ್ಯಗಳು ಅಲ್ಕಾ ಸರೌಗಿಯವರ 'ಕಾಲಿ ಕಥಾ ವಯಾ ಬೈ ಪಾಸ್' ನ ವಸ್ತುವಾಗಿವೆ.

ಆದರೂ ತಮ್ಮ ಸ್ಫೂರ್ತಿಯ ನೆಲೆ ತಮ್ಮ -ದಾದಿ, ಅಂದರೆ ತಮ್ಮ ತಾಯಿಯ ತಂದೆ ಎಂಬುದಾಗಿ ಲೇಖಕಿ ನುಡಿಯುತ್ತಾರೆ, ಬಹಳ ಉತ್ತಮ ವ್ಯಕ್ತಿ ದಾದಿ. ಈ ಅಜ್ಜಿಗೆ ಹತ್ತಿರವಾಗಿದ್ದ ಲೇಖಕಿಗೆ ದಾದಿಯ ಇತಿಹಾಸದ ಬಗ್ಗೆ, ಸಮಾದಾಯದ ಇತಿಹಾಸದ ಬಗ್ಗೆ, ಹಾಗೂ ಸ್ವತಂತ್ರ್ಯ ಸಂಗ್ರಾಮದ ಸಮಯದಲ್ಲಿ ವ್ಯಕ್ತಿಗಳಿಗಿದ್ದ ದ್ವಂದ್ವಗಳ ಬಗ್ಗೆ ಹೆಚ್ಚು ಅರಿವು ಮೂಡಿದುದು. 'ಕಾಲಿ ಕಥಾ' ಕಾದಂಬರಿಯಲ್ಲಿ ಈ ಎಲ್ಲಾ ಅಂಶಗಳು ಸೇರಿಕೊಂಡಿವೆ. ಇವೆಲ್ಲ ಒಟ್ಟಾಗಿ ಹೆಣೆದುಕೊಂಡಿವೆ. ದಾದಿಯ ನೆನಪುಗಳ ಮೂಲಕ ಅಲ್ಕಾ ಸರೌಗಿ ಆಕೆಯ ಇಡಿಯ ಬದುಕನ್ನು ಬಲ್ಲವರಾಗಿದ್ದರು. ನಂತರ ಮಾರ್ವಾಡಿ ಸಮುದಾಯದ ಬಗೆಗಿನ ಪುಸ್ತಕಗಳನ್ನು ಓದಲು ಪ್ರಾರಂಭಿಸಿದರು. ಉದಾ: ಟಿವ್ ಬರ್ಗ್ನನ 'ದಿ ಮಾರ್ವಾರೀಸ್ - ಫ್ರಂ ಟ್ರೇಡರ್ಸ್ ಟು ಇಂಡಸ್ಟ್ರಿಯಲಿಸ್ಟ್' . ಹೀಗೆ ಓದುವಾಗ ಅಲ್ಲಿರುವ ಎಷ್ಟೋ ವಿಚಾರಗಳು ತಮಗೆ ತಿಳಿದಿವೆ ಎಂದು ಅವರಿಗೆ ಅನ್ನಿಸತೊಡಗಿತ್ತು. ಬರವಣಿಗೆಯಲ್ಲಿ ತೊಡಗಿಸಿಕೊಂಡಾಗ ಎಲ್ಲಾ ಸಂಗತಿಗಳೂ ಕಾದಂಬರಿಯ ದ್ರವ್ಯಗಳಾಗಿದ್ದವು. ಅವರು ಕೇಳಿಸಿಕೊಂಡದ್ದು, ಓದಿದ್ದು, ನೆನಪಿಸಿಕೊಂಡದ್ದು ಎಲ್ಲವೂ ಅನಿರೀಕ್ಷಿತ ಬಂಧಗಳಾಗಿ ಕಾದಂಬರಿಯಲ್ಲಿ ಕಾಣಿಸಿಕೊಂಡವು. ಅವರ ದ್ರವ್ಯ ಅವರ ಹಿಡಿತದಲ್ಲಿಯೇ ಇರಲಿಲ್ಲ. ಅವರು ಕಲ್ಕತ್ತದ ಬಗ್ಗೆ, ಸ್ವತಂತ್ರ್ಯ ಚಳುವಳಿಯ ಬಗ್ಗೆ, - ಓದಿದ ವಿಚಾರಗಳು, ವೈಯಕ್ತಿಕ ದಿನಚರಿಗಳು, ವೈಯಕ್ತಿಕ ಮಾತು-ಕತೆಗಳು-ಈ ಎಲ್ಲವೂ ಕಾದಂಬರಿಯ ಓಟವನ್ನು ಹೆಚ್ಚಿಸಿದ್ದವು. ನಿದ್ರೆಯಲ್ಲಿಯೂ ಬರವಣಿಗೆಯ ಸಿದ್ಧತೆ ನಡೆಸುತ್ತಿದ್ದ ಇವರು ಎದ್ದ ಮರುಕ್ಷಣವೇ ಪುಟಗಳಲ್ಲಿ ಅವನ್ನು ಮೂಡಿಸುತ್ತಿದ್ದರು. ಕೆಲವೊಂದು ಬಾರಿ ಅವರಿಗೆ ನಿದ್ರೆಯೇ ಸುಳಿಯುತ್ತಿರಲಿಲ್ಲ. ಅದೊಂದು ಸೃಜನಾತ್ಮಕವಾದ, ಕಠಿಣವಾದ ಪ್ರವಾಸವಾಗಿತ್ತು. ಹುಟ್ಟಿದ ಊರಾದ ಕಲ್ಕತ್ತ ಶೋಧಿಸುವ, ಸಮುದಾಯದ ಬೇರುಗಳನ್ನು ಅರಸುವ, ಸ್ವತಂತ್ರ್ಯ ಪೂರ್ವದ ವಿಚಾರಧಾರೆ ಕೆದಕುವ ಪ್ರವಾಸ ಆದಾಗಿತ್ತು. ಅದೇ ಉತ್ಸಾಹ, ಅದೇ ದುಗುಡ, ಆತಂಕವನ್ನು ಆಕೆ ಓದುಗರಿಗೆ ಕೊಡಲು ಇಚ್ಛಿಸಿದ್ದರಿಂದ ಅವು ಆಕೆಯಲ್ಲಿ ಸ್ಫುರಿಸಿದ ಹಾಗೆ ಅಷ್ಟೇ ಒರಟಾಗಿ, ನಯ-ನಾಜುಕಿಲ್ಲದೆ, ಅಸಮಾನವಾಗಿ ಆಕೆ ಬರೆಯ ತೊಡಗಿದ್ದರು.

ಹಾಗಾಗಿ ಪ್ರಥಮವಾಗಿ ಬರೆದುದನ್ನು ಅಲ್ಕಾ ಸರೌಗಿ ಮತ್ತೆ ಮತ್ತೆ ಸಂಸ್ಕರಿಸಿ ನೋಡಲೇ ಇಲ್ಲ. ಬರೆದುದನ್ನು ಪತ್ರಿಕೋದ್ಯಮಿ ಹಾಗೂ ಲೇಖಕರಾದ ಅಶೋಕ್ ಸೆಕ್‌ಸಾರಿಯ ಅವರಿಗೆ ಓದಿ ಹೇಳುತ್ತಿದ್ದರು. ಅಶೋಕ್ ಇವರಿಗೆ ಅನೇಕ ಸಲಹೆ ನೀಡುತ್ತಿದ್ದರು. ಅವರ ಸಲಹೆಗಳನ್ನು ಲೇಖಕಿ ಮನಸ್ಸಿಟ್ಟು ಕೇಳುತ್ತಿದ್ದರು. ಆದಾಗ್ಯೂ ಬರೆದ ಯಾವುದನ್ನು ಬದಲಾವಣೆ ಮಾಡಲು ಅವರ ಕೈಯಲ್ಲಿ ಸಾಧ್ಯವೇ ಆಗಲಿಲ್ಲ. ಒಂದೇ ಓಟದಲ್ಲಿ ಕಾದಂಬರಿ ಬರೆಯುವುದು ಅಶೋಕರವರಿಗೆ ಸರಿ ಎನ್ನಿಸಿರಲಿಲ್ಲ. ಅಲ್ಕಾ ಸರೌಗಿ ತಮ್ಮ ಕಾದಂಬರಿಯ ಭಾಗವೊಂದನ್ನು ತಮ್ಮ ಹಿಂದಿ ಪ್ರೊಫೆಸರ್ ಹಾಗೂ ಅಶೋಕ್ ರವರಿಗೆ ಓದಿ ಹೇಳಿದಾಗ - ಅವರು ಇಡಿಯ ಬರಹವನ್ನು ಒಂದು ಬದಿಗಿಟ್ಟು, ಮೂರು ತಿಂಗಳ ನಂತರ ಕೈಗೆ ತೆಗೆದುಕೋ ಎಂದು ಸಲಹೆ ನೀಡಿದ್ದರು.

ಆ ದಿನ ಅಲ್ಕಾರವರು ತುಂಬಾ ವೇದನೆಯಿಂದ ಮನೆಗೆ ಮರಳಿದ್ದರು. ಆಕೆಯ ಅತ್ತಿಗೆ ವಿಭಾ-ಆಕೆಯ ಸ್ನೇಹಿತೆ ಕೂಡಾ.

ಬಾಗಿಲು ತೆರೆದ ಆಕೆ 'ಪ್ರೊಫೆಸರ್ ಏನು ಹೇಳಿದರು'? ಎಂದು ಕೇಳಿದರು. ಅಲ್ಕಾ ನಡೆದುದನ್ನು ಹೇಳಿದಾಗ, 'ಏನೂ ಬದಲಾಯಿಸಬೇಡ, ಕಾದಂಬರಿ ಪರ್‌ಫೆಕ್ಟ್ ಆಗಿದೆ, ಎಂದರು. ವಿಭಾ ಒಬ್ಬ ಸಾಮಾನ್ಯ ಓದುಗರು. ಹನ್ನೆರೆಡು ಕಾದಂಬರಿಗಳನ್ನು ಆಕೆಯ ಜೀವನದಲ್ಲಿ ಆಕೆ ಓದಿರಬಹುದು ಅಷ್ಟೇ. ಆದರೆ ಆಕೆಯ ಸಲಹೆಯಂತೆ ಅಲ್ಕಾ ಸರೌಗಿ ವರ್ತಿಸಿದರು. ನಂತರ ಹಿಂದಿ ವಿಮರ್ಶಕ ಡಾ.ಪರಮಾನಂದ ಶ್ರೀವಾತ್ಸವ ಅವರಿಗೆ ಕಾದಂಬರಿಯ ಹಸ್ತ ಪ್ರತಿಯನ್ನು ನೀಡಿದ್ದರು.

ಅವರು ಗೋರಕ್‌ಪುರದಿಂದ ಫೋನ್ ಮಾಡಿ ಕಾದಂಬರಿಯ uneven structure ಕಾದಂಬರಿಯ ಗಟ್ಟಿಯಾದ ಅಂಶವಾಗಿರುವುದರಿಂದ ಅದನ್ನು ಪುನಃ ಬದಲಾಯಿಸ-ಬಾರದೆಂದು ಹೇಳಿದ್ದರು. ಹೊಸ ಲೇಖಕರ ಪುಸ್ತಕಗಳನ್ನು ಪ್ರಕಟಿಸಲು ಉತ್ಸುಕರಾಗಿದ್ದ ಆಧಾರ್ ಪರಕಾಶನ ಪಂಚ್ ಕುಲದವರು ಇವರ 'ಕಾಲಿ ಕಥಾ ವಯಾ ಬೈ ಪಾಸ್' ನ್ನು ಪ್ರಕಟಿಸಿದರು.

ಅಲ್ಕಾ ಸರೌಗಿ ಲೇಖಕಿಯಾಗಿದ್ದು ಆಕಸ್ಮಿಕವಾಗಿ. ಈಕೆ ಆಗಾಗ್ಗೆ ವೈದ್ಯಕೀಯದ ಬಗ್ಗೆ ಹಾಗೂ ಮಹಿಳಾ ವಿಚಾರಗಳ ಬಗ್ಗೆ ಬರೆಯುತ್ತಿದ್ದರು. ಅವರು ಮೊಟ್ಟ ಮೊದಲ ಸಣ್ಣ ಕಥೆ ಬರೆದುದು ಒಬ್ಬ ಸಾಧಾರಣ ಮನುಷ್ಯನಿಂದಾಗಿ. ಆ ಮನುಷ್ಯ ಸದಾ ನಗುತ್ತಿದ್ದ. ಅವನು ಹುಚ್ಚನಿರಬೇಕೆಂದು ಬಹುಮಂದಿ ಭಾವಿಸಿದ್ದರು. ಸಮಾಜದ ಯಾವ ಸ್ಥಾನ-ಮಾನ ಆತನಿಗೆ ನೀಡಬೇಕೆಂದು ಲೇಖಕಿಗೆ ತಿಳಿದಿರಲಿಲ್ಲ. ಒಂದು ಕುಟುಂಬದೊಂದಿಗೆ ತಂಗಲು ಹೋದಾಗ ಆ ಮನುಷ್ಯ ಇವರ ಸಾಮಾನು ಸರಂಜಾಮುಗಳನ್ನು ಹೊತ್ತು ತಂದಿದ್ದ. ಅವನು ಆ ಕುಟುಂಬದ ಸದಸ್ಯನಾಗಿರಲಿಲ್ಲ, ಅಥವಾ ಸೇವಕ ಕೂಡಾ ಆಗಿರಲಿಲ್ಲ. ಯಾರೂ ಕೂಡಾ ಅವನ ಬಗೆಗೆ ಗಮನ ಹರಿಸಿಯೂ ಇರಲಿಲ್ಲ. ಅಲ್ಕಾ ಸರೌಗಿ ಬದುಕಿನ ಸಣ್ಣ ಹಾಗೂ ದೊಡ್ಡ ಅಸಮಾನತೆಗಳ ಕುರಿತು ಯಾವಾಗಲೂ ಯೋಚಿಸುತ್ತಿದ್ದರು. ಯಾವ ಸ್ಥಾನ-ಮಾನವನ್ನು ಕೊಡಲಾಗದ ಈ ಮನುಷ್ಯ ಲೇಖಕಿಯ ಮನಸ್ಸಲ್ಲಿ ಬಹಳ ದಿನ ಗೀಳಾಗಿ ಉಳಿದುಕೊಂಡಿದ್ದ. ಈ ಸಂದರ್ಭದಲ್ಲಿಯೇ ಈಕೆ ಮೊಟ್ಟ ಮೊದಲು ಸಣ್ಣ ಕಥೆ ಬರೆದರು. 'ಆಪ್ ಕಿ ಹಸಿ' ('ನಿನ್ನ ನಗು') ಕಥೆಯ ಹೆಸರು. ಲೇಖಕಿಗೆ ಪ್ರಿಯವಾಗಿದ್ದ ಕವಿ ರಘುವೀರ್ ಸಹಾಯ್ ರವರ ಕಾವ್ಯದ ಹೆಸರು ಅದು. ಈ ಕಥೆಯನ್ನು ಇವರು ಅಶೋಕ್‌ರವರಿಗೆ ತೋರಿಸಿದರು. ಇದನ್ನು ಇಷ್ಟ ಪಟ್ಟ ಅವರು ವರ್ತಮಾನ ಸಾಹಿತ್ಯದ ವಿಶೇಷ ಸಂಚಿಕೆಗೆ ಕಳಿಸುವಂತೆ ಸಲಹೆ ನೀಡಿದರು. ಅಲ್ಲಿ ಅವರ ಪ್ರಥಮ ಸಣ್ಣ ಕಥೆ ಪ್ರಕಟವಾಗಿತ್ತು.

ಲೇಖಕಿಗೆ ಬಾಲ್ಯದಿಂದಲೂ ಪುಸ್ತಕಗಳೆಂದರೆ ಪ್ರಾಣ. ಈಕೆಯ ಅಕ್ಕಂದಿರ ಶಾಲೆಯ ಪುಸ್ತಕಗಳನ್ನು ಈಕೆ ಓದುತ್ತಿದ್ದರು. ಪುಸ್ತಕಗಳು ಹೆಚ್ಚು ದೊರೆಯದಿದ್ದಾಗ ಯಾವ ಪುಸ್ತಕ ದೊರೆತರೂ ಅದನ್ನು ಓದುತ್ತಿದ್ದರು. ಹೊಸದಾಗಿ ಶಾಲೆಗೆ ಸೇರಿದ ಸಂದರ್ಭದಲ್ಲಿ ಕೊಡುವ ಎಲ್ಲಾ ಪುಸ್ತಕಗಳನ್ನೂ ಇವರು ಒಮ್ಮೆಲೇ ಓದಿ ಮುಗಿಸುತ್ತಿದ್ದರು. ಸಾಮಾನಿನ ಪೊಟ್ಟಣದ ಮೇಲಿನ ಪೇಪರ್ ಸಹಾ ಇವರು ಓದುತ್ತಿದ್ದರು. ಈ ಲೇಖಕಿಯ ತಂದೆಯ ದೊಡ್ಡಣ್ಣನ ಹೆಂಡತಿಗೆ ಸಾಹಿತ್ಯದ ಬಗ್ಗೆ ಆಸಕ್ತಿ ಇತ್ತು. ಇವರಿಂದಾಗಿ ಕೂಡಾ ಅಲ್ಕಾ ಸರೌಗಿ ಸಾಹಿತ್ಯದ ಕಡೆ ಒಲವು ತೋರಿಸುವಂತಾಯಿತು.

ಈಕೆಯ ದಾದಿ ಕೂಡಾ ಒಳ್ಳೆಯ ಓದುಗಾರರಾಗಿದ್ದರು. ಸಾಯುವ ಕೆಲವೇ ತಿಂಗಳುಗಳ ಮುಂಚೆ ಆಕೆ ಟಾಲ್‌ಸ್ಟಾಯ್‌ರವರ ಹಿಂದೀ ಅನುವಾದದ ಕಥೆಗಳನ್ನು ಓದುತ್ತಿದ್ದರು.

ಅಲ್ಕಾ ಸರೌಗಿಗೆ ಮದುವೆಯಾದುದು ಇಪ್ಪತ್ತನೆಯ ವಯಸ್ಸಿನಲ್ಲಿ. 25ನೆಯ ವರ್ಷದಲ್ಲಿ ಇವರಾಗಲೇ ಎರೆಡು ಮಕ್ಕಳ ತಾಯಿಯಾಗಿದ್ದರು. ಅವರ ಪುಸ್ತಕ ಪ್ರಪಂಚದಿಂದ ಅವರಿಗೇ ಅರ್ಥವಾಗದ ಬದುಕಿಗೆ ಅವರು ತೆರೆದು ಕೊಳ್ಳಬೇಕಾಗಿತ್ತು. ಮಕ್ಕಳನ್ನು ಬೆಳೆಸುವುದು, ಅಡಿಗೆ, ಅವಿಭಕ್ತ ಕುಟುಂಬದ ಸದಸ್ಯರನ್ನು ಸಂತೋಷ ಪಡಿಸುವುದು ಇತ್ಯಾದಿ. ಬದುಕೆಂದರೆ ಇದೇನಾ ಎನ್ನುವಂತಾಗಿತ್ತು ಅವರಿಗೆ. ಈ ಸಂದರ್ಭದಲ್ಲಿ ಕುಟುಂಬದ ಗೆಳೆಯರೊಬ್ಬರು ಡಿಕ್ಷನರಿ ಕೆಲಸಕ್ಕೆ ಸಹಾಯ ಮಾಡಲು ಆಕೆಗೆ ಸಾದ್ಯವಾಗುತ್ತದೆಯೇ ಎಂದು ವಿಚಾರಿಸಿದರು. ಅದು ಹಿಂದಿಯಲ್ಲಿ ಮಕ್ಕಳ ಕೋಶವಾಗಿತ್ತು. ಪ್ರಾರಂಭದಲ್ಲಿ ಕೆಲವು ತಿಂಗಳುಗಳು ಮಾತ್ರ ಅಲ್ಲಿ ಸರೌಗಿ ಕೆಲಸ ಮಾಡುವುದು ಎಂದಾಗಿತ್ತು. ಆದರೆ ಕೆಲಸ ಪ್ರಾರಂಭಿಸಿದ ಮೇಲೆ ಹೊಸ ಜಗತ್ತೊಂದು ಲೇಖಕಿಯ ಪಾಲಿಗೆ ತೆರೆದಿತ್ತು. ನಂತರದಲ್ಲಿ ತಿರುಗಿ ನೋಡುವ ಪ್ರಶ್ನೆಯೇ ಇರಲಿಲ್ಲ. ಆಕೆಯ ಕುಟುಂಬದಲ್ಲಿ ಕೆಲಸಕ್ಕೆ ಹೋಗುವ ಸಂಪ್ರದಾಯವಿರಲಿಲ್ಲ. 'ಕೋಶ್'ಗೆ ಕೆಲಸ ಮಾಡುವ ಸಂದರ್ಭದಲ್ಲಿ ಈಕೆ ಎರಡನೇ ಮಗುವಿನ ತಾಯಿಯಾಗಲಿದ್ದರು. ಯಾವುದೇ ರೀತಿಯ ತೊಂದರೆ, ಸಮಸ್ಯೆಗಳನ್ನು ಮನೆಯಲ್ಲಿ ಹೇಳುವಂತಿರಲಿಲ್ಲ. ಹೇಳಿದರೆ ಕೆಲಸ ಬಿಡುವಂತೆ ಇವರನ್ನು ಒತ್ತಾಯಿಸಲಾಗುತ್ತಿತ್ತು. ಹಾಗಾಗಿ ಯಾವುದೇ ಸಮಸ್ಯೆಯನ್ನು ಇವರು ತೋರಗೊಡುತ್ತಿರಲಿಲ್ಲ. ಮೊದಲನೇ ಹೆರಿಗೆಯಲ್ಲಿ ಲೇಖಕಿ ಬಹಳಷ್ಟು ಸಮಸ್ಯೆ ವ್ಯಕ್ತಪಡಿಸಿ ಒಂದು ದೊಡ್ಡ ನಾಟಕವನ್ನೇ ಸೃಷ್ಟಿಸಿದ್ದರು. ಆದರೆ ಎರಡನೆಯ ಹೆರಿಗೆ ಸಂದರ್ಭ ಬಹಳ ಶಾಂತವಾಗಿ ನಡೆದು ಹೋಯಿತು.

'ಕೋಶ್' ಗಾಗಿ ಕೆಲಸ ಮಾಡುವ ಸಂದರ್ಭದಲ್ಲಿ ಇವರು ಅಶೋಕ್ ಸೆಕ್‌ಸಾರಿಯ ಅವರನ್ನು ಭೇಟಿಯಾದದ್ದು. ಅವರ ಜೊತೆ ಏನು ಬೇಕಾದರೂಮಾತನಾಡಬಹುದಿತ್ತು. ಹೇಳುವುದನ್ನೆಲ್ಲ ಆತ ಗಂಭೀರವಾಗಿ ಕೇಳಿಸಿಕೊಳ್ಳುತ್ತಿದ್ದರು. ಬಾಲ್ಯದ ಘಟನೆಯೊಂದರ ಬಗ್ಗೆ ಈಕೆ ಮಾತನಾಡಿದಾಗ ಅದನ್ನೇ ಏಕೆ ಬರೆಯಬಾರದು ಎಂದು ಪ್ರೋತ್ಸಾಹಿಸಿದ್ದರು. ಆಗ ಅವರು ಮೊದಲು ಬರೆದ ಬರಹ ' ಆಂಗ್ಲ ಶಾಲೆಯಲ್ಲಿ ನನ್ನ ಮೊದಲ ದಿನ'. ಅಲ್ಕಾ ಸರೌಗಿ ಶಾಲೆ ಕಲಿತದ್ದು ಹಿಂದಿ ಮಾಧ್ಯಮದ ಮೂಲಕ. ಪ್ರೌಢ ಶಾಲೆಗೆ ಹೋಗುವ ಮೊದಲು ಈಕೆಯನ್ನು ಸ್ವಲ್ಪಕಾಲ ಆಂಗ್ಲ ಮಾಧ್ಯಮದ ಶಾಲೆಗೆ ಹಾಕಲಾಗಿತ್ತು. ಆ ದಿನ ಉಪಾಧ್ಯಾಯಿನಿಯೊಬ್ಬರು ಅಲ್ಕಾರವರನ್ನು ಕುರಿತು ಏನೋ ಹೇಳಿದರು. ಆ ಪದ 'C' ಎನ್ನುವ ಅಕ್ಷರದಿಂದ ಪ್ರಾರಂಭವಾದದ್ದು. ಅವರು ಏನು ಹೇಳಿದರೆಂದು ಆಕೆಗೆ ಅರ್ಥವಾಗಿರಲಿಲ್ಲ. ಆದರೆ ಇಡಿಯ ತರಗತಿಯ ಮಕ್ಕಳು ನಗಲು ಪ್ರಾರಂಭಿಸಿದರು. ಲೇಖಕಿಗೆ ಅವಮಾನ ಎನ್ನಿಸಿತ್ತು. ಈ ನೋವನ್ನು ಅವರಿಗೆ ಮೀರಲು ಸಾಧ್ಯವಾದುದು ಅನೇಕ ವರ್ಷಗಳ ನಂತರ. ಅದನ್ನು ಕುರಿತು ಬರೆದಾಗ ಮಾತ್ರ. ಆ ಪದ ಯಾವುದೆಂದು ತಿಳಿಯಲು ಲೇಖಕಿ ಹಲವಾರು ಬಾರಿ ಡಿಕ್ಷನರಿಯಲ್ಲಿ C ಯಿಂದ ಪ್ರಾರಂಭವಾಗುವ ಎಲ್ಲಾ ಪದಗಳನ್ನು ಓದಿದರೂ ಇಂದಿಗೂ ಆಕೆಗೆ ಆ ಪದ ತಿಳಿದಿಲ್ಲ. ಅಲ್ಕಾರವರಿಗೆ ಇಂಗ್ಲೀಷ್ ಒಂದು ಅಸಮಾನತೆಯ ಸಂಕೇತವಾಗಿ ಕಂಡಿದೆ. ನಂತರ ಮತ್ತೆ ಹಿಂದಿ ಮಾಧ್ಯಮದಲ್ಲಿಯೇ ಈಕೆ ಹೈಯರ್ ಸೆಕೆಂಡರಿ ಮುಗಿಸಿದರು. ಕಾಲೇಜಿನಲ್ಲಿರುವಾಗ ಆಂಗ್ಲಭಾಷೆಯ ಮೇಲೆ ಪ್ರಭುತ್ವ ಹೊಂದುವುದು ಆಕೆಗೆ ದೊಡ್ಡ ಸವಾಲಾಗಿ ಕಾಣಿಸಿತ್ತು. ಆ ನಂತರ ಇಂಗ್ಲಿಷ್‌ನಲ್ಲಿ ದೊರೆಯುವ ಪುಸ್ತಕಗಳನ್ನೆಲ್ಲ ಅವರು ಓದಲು ಪ್ರಾರಂಭಿಸಿದರು.

ಬಾಲ್ಯದಲ್ಲಿ ವಿದ್ಯಾಭ್ಯಾಸದ ಬಗ್ಗೆ ಇವರಿಗೇನೂ ಸಾಕಷ್ಟು ಪ್ರೋತ್ಸಾಹ ದೊರಕಿರಲಿಲ್ಲ. ಎಷ್ಟೇ ಓದಿದರೂ ಮದುವೆ, ಮಕ್ಕಳು, ಮನೆ ಇವೇ ಮುಖ್ಯ ಹೆಂಗಸರಿಗೆ ಎಂದು ಹೇಳಲಾಗುತ್ತಿತ್ತು. P.U. ಪಾಸಾದಾಗ ತಾನೇಕೆ ಓದುವುದನ್ನು ನಿಲ್ಲಿಸಬಾರದೆಂದು ವಾದಿಸಿ ಆಕೆ ಇಡಿಯ ಪುಸ್ತಕ ಬರೆದರೂ ಆಕೆಯ ತಂದೆಯ ಮೇಲೆ ಅದೇನೂ ಪ್ರಭಾವ ಬೀರಿರಲಿಲ್ಲ. ಮದುವೆಯ ನಂತರ ತಂದೆ ಹೇಳುತ್ತಿದ್ದ ಮಾದರಿಯ ಬದುಕಿಗೇ ಈಕೆ ಅಂಟಿಕೊಳ್ಳುವಂತಾಯಿತು. ಆಕೆಯ ಬದುಕಿನ ದಿಕ್ಕನ್ನು ಹೇಗೆ ಬದಲಾಯಿಸಬೇಕೆಂದು ಆಕೆಗೇ ತಿಳಿದಿರಲಿಲ್ಲ. ಹೋಮಿಯೋಪತಿಯ ಬಗ್ಗೆ ಓದಲು ಪ್ರಾರಂಭಿಸಿದರು. ನಂತರ ನ್ಯೂರೋಲಜಿಯ ಬಗ್ಗೆ ಕೆಲವು ಪುಸ್ತಕ ತಂದು ಓದಲು ಪ್ರಾರಂಭಿಸಿದರು. ಆಕೆಯ ಹತಾಶಾ ಮನೋಭಾವದಲ್ಲಿ ಆಕೆ ಏನೇನೋ ಮಾಡಲು ಪ್ರಯತ್ನಿಸಿದರು. ಈ ಹಂತದಲ್ಲಿಯೇ 'ಕೋಶ್' ಕೆಲಸಕ್ಕೆ ಹೋಗುವಂತಾಗಿದ್ದರಿಂದ ಆಕೆಯ ಬದುಕಲ್ಲಿ ಒಂದು ಬಲವಾದ ತಿರುವನ್ನೇ ಕಾಣುವಂತಾಯಿತು. ಈಕೆಯ ಅತ್ತೆ ಮೌನವಾಗಿಯೇ ಈಕೆಗೆ ಅನುಮತಿ-ಪ್ರೋತ್ಸಾಹ ನೀಡಿದರು. ಮಾವ ಪ್ರೋತ್ಸಾಹಿಸದಿದ್ದರೂ ಕೆಲಸಕ್ಕೆ ಹೋಗಲೇಬೇಡ ಎಂದೇನೂ ಹೇಳಲಿಲ್ಲ. 'ಕೋಶ್' ಕೆಲಸ ಮುಗಿಸಿದ ಮೇಲೆ ಈಕೆ ಹಿಂದಿ ಎಂ.ಎ.ಮಾಡುವುದನ್ನು ಇಷ್ಟಪಟ್ಟಾಗ ಆಕೆಯ ಮಾವನಿಗೆ ಆಶ್ಚರ್ಯವಾಗಿತ್ತು. 'ಮನೆಯಲ್ಲಿ ಮಾಡಲು ನಿನಗೇನೂ ಕೆಲಸವಿಲ್ಲವೇನು' ಅಂದಿದ್ದರು. ಎಂ.ಎ.ಗೆ ಖಾಸಗಿ ವಿದ್ಯಾರ್ಥಿನಿಯಾಗಿ ಈಕೆ ಸೇರಿಕೊಂಡರು. ಆದರೆ ತರಗತಿಗಳಿಗೆ ಹಾಜರಾಗಲು ಈಕೆಗೆ ವಿಶೇಷವಾದ ಪರವಾನಗಿ ಇತ್ತು.

ವಿಶ್ವವಿದ್ಯಾನಿಲಯದಲ್ಲಿ ಮೊದಲನೇ ತರಗತಿಗೆ ಹಾಜರಾದಾಗ ಇವರ ಮನಸ್ಸಿನ ಭಾವನೆ ಅತ್ಯದ್ಭುತ. ಅದು ಅಂತಹ ಉತ್ತಮವಾದ ಉಪನ್ಯಾಸ ಆಗದಿದ್ದಾಗ್ಯೂ ಕೂಡಾ ಈಕೆಗೆ ಬೇರೊಂದು ಪ್ರಪಂಚದಲ್ಲಿ ಇದ್ದ ಹಾಗಿನ ಅನುಭವ. ಅಂತಹ ಜಗತ್ತೊಂದು ಅಸ್ತಿತ್ವದಲ್ಲಿದೆ ಎಂದು ಆಕೆಗೆ ತಿಳಿದಿರಲಿಲ್ಲ. ಅವರಿಗೆ ಹೊಸ ದಿಗಂತವೊಂದು ತೆರೆದ ಅನುಭವ. ಎಷ್ಟೋ ವರ್ಷಗಳು ಏನೇನೆಲ್ಲ ಕಳೆದುಕೊಂಡೆ ಎಂದು ಆಕೆಗೆ ಅನ್ನಿಸ ತೊಡಗಿತ್ತು.. ಈ ಜಗತ್ತಿನ ಭಾಗವಾಗಲು ಬಯಸಿದ್ದ ಲೇಖಕಿ ಮನೆಯಲ್ಲಿ ಯಾರೂ ತಮ್ಮ ವಿರುದ್ಧ ಟೀಕೆ ಮಾಡದಿರುವ ಹಾಗೆ ವರ್ತಿಸುತ್ತಿದ್ದರು. ತರಗತಿಗಳನ್ನು ಮುಗಿಸಿ ಮನೆಗೆ ಹೋದ ಮೇಲೆ ಈಕೆ ನೇರವಾಗಿ ಅಡಿಗೆ ಮನೆಗೆ ಹೋಗಿ ಎಲ್ಲರನ್ನು ಸಂತೋಷ ಪಡಿಸಲು ಪ್ರಯತ್ನಿಸುತ್ತಿದ್ದರು. ಕೆಲವೇ ಘಂಟೆಗಳ ಸ್ವಾತಂತ್ರ್ಯಕೋಸ್ಕರ ಇವರು ಹೀಗೆ ಮಾಡುತ್ತಿದ್ದರು. ಆಕೆಯ ತವರು ಮನೆಯಲ್ಲಿ ಕಾಲೇಜಿಗೆ ಹೋಗುವುದು, ಓದುವುದು ಮಾತ್ರ ಆಕೆಯ ಕೆಲಸವಾಗಿತ್ತು. ಓದುವುದರ ಮೂಲಕ ತಾನು ಕುಟುಂಬದ ಆಕಾಂಕ್ಷೆ - ಆಸೆ ಪೂರೈಸುತ್ತೇನೆಂಬ ಭಾವ ಅದಾಗಿತ್ತು. ಆದರೆ ಅತ್ತೆಯ ಮನೆಯಲ್ಲಿ ವಿದ್ಯಾಭ್ಯಾಸ ಉಪಕಾರಕ್ಕಾಗಿ ಅವರನ್ನು ಬೇಡುವುದಾಗಿತ್ತು. ತರಗತಿಗಳಿಗೆ ಹೋಗಲು ಆಕೆ ಏನನ್ನು ಮಾಡಲೂ ಕೂಡಾ ಸಿದ್ಧರಾಗಿದ್ದರು. ಬೇರೆ ವಿದ್ಯಾರ್ಥಿನಿಯರು ತರಗತಿಯ ನಂತರ ಚರ್ಚಿಸಲೋ ಅಥವಾ ಹರಟೆ ಹೊಡೆಯಲೋ ನಿಂತುಕೊಂಡರೆ, ಅಲ್ಕಾ ಸರೌಗಿ ಯಾರೋ ತಮ್ಮನ್ನು ಚಾಕು ಹಿಡಿದು ಅಟ್ಟಿಸಿಕೊಂಡು ಬಂದವರಂತೆ ಮನೆಗೆ ಓಡಿ ಬರುತ್ತಿದ್ದರು.

ಎಂ.ಫಿಲ್.ಮಾಡುವಾಗ ಇವರು ಮನೆಯಲ್ಲಿ ಯಾರಿಗೂ ಹೇಳಲೇ ಇಲ್ಲ. ಇವರ ಗಂಡನಿಗೆ ಗೊತ್ತಿತ್ತು. ಅವರು ನಿನಗೇನು ಬೇಕೋ ಅದನ್ನು ಮಾಡು, ಆದರೆ ನನ್ನ-ತಂದೆ-ತಾಯಿ ಹಾಗೆ-ಹೀಗೆ ಹೇಳಿದರು ಎನ್ನಬೇಡ. ನೀನೇ ಅದನ್ನೆಲ್ಲ ನಿಭಾಯಿಸಿಕೊಂಡು ಹೋಗಬೇಕು ಎಂದಿದ್ದರು. ವಿಭಾ ಇವರ ಆಪ್ತ ಗೆಳತಿ. ಇವರ ಮಗಳ ಜವಾಬ್ದಾರಿಯನ್ನೆಲ್ಲ ಅವರೇ ನೋಡಿಕೊಂಡಿದ್ದರು. ಈಕೆಯ ಅತ್ತೆ ಧಾರ್ಮಿಕ

ಮನೋಭಾವದವರು. ಅಲ್ಕಾ ತಮ್ಮ ಕುಟುಂಬದಿಂದ ತಮಗೆ ಹೆಚ್ಚು ಪ್ರೀತಿ ದೊರಕಿದೆ ಎನ್ನುತ್ತಾರೆ. ಅತ್ತೆ ಶೋಷಿತ ಬದುಕು ನಡೆಸಿರುವುದರಿಂದ ಅಲ್ಕಾ ಇಷ್ಟಪಟ್ಟದ್ದನ್ನು ಮಾಡಲಿ ಎಂದು ಆಶಿಸುತ್ತಾರೆ. ಆದರೆ ಇದೇ ಸ್ವಾತಂತ್ರ್ಯ ವಿಭಾ ಅಥವಾ ಜ್ಯೋತಿ-ಇವರ ಓರಗಿತ್ತಿಯರಿಗಿಲ್ಲ. ಇಲ್ಲಿ ಅಸಮಾನತೆ ಇದೆ ಎಂದು ಅಲ್ಕಾ ಭಾವಿಸುತ್ತಾರೆ. ಈಕೆ ಚನ್ನಾಗಿ ವಿದ್ಯಾಭ್ಯಾಸ ಮಾಡುತ್ತಾರೆ ಎಂತಲೋ, ಅಥವಾ ಇವರ ಪುಸ್ತಕಗಳು ಸಾರ್ವಜನಿಕರಿಂದ ಗುರುತಿಸಲ್ಪಟ್ಟಿವೆ ಎಂತಲೋ, ಲೇಖಕಿಗೆ ವಿಶೇಷವಾದ ಹಕ್ಕು ಸಿಕ್ಕಿದೆ. ಆದರೆ ಇವರದೇ ದೋಣಿಯಲ್ಲಿ ಸಾಗುವ ಇತರ ಹೆಂಗಸರಿಗೆ ಈ ಸವಲತ್ತು ಇಲ್ಲ.

ಲೇಖಕಿ ಮೊದಲೇ ಹೇಳಿದ ಹಾಗೆ ಕಲ್ಕತ್ತಾದ ಇತಿಹಾಸದ ಭಾಗವಾಗಿದ್ದೇ ಅವರ ತಂದೆಯ ತಾಯಿಯ ಮೂಲಕವಾಗಿ. ಈಕೆಯ ಅಜ್ಜಿ ಆಕೆಯ ಕಾಲಕ್ಕಿಂತ ಬಹಳ ಮುಂದೆ ಯೋಚಿಸುತ್ತಿದ್ದರು. ನೀನು ಏನಾದರೂ ಸಾಧನೆ ಮಾಡಲೇಬೇಕು ಎಂಬುದಾಗಿ ಅಲ್ಕಾ ಸರೌಗಿಗೆ ನುಡಿದಿದ್ದರು. ಇವರ ಕುಟುಂಬದಲ್ಲಿ ಇವರ ದಾದಿಯೇ ಕಲ್ಕತ್ತದಲ್ಲಿ ಮೊದಲು ಮನೆ ಮಾಡಿದವರು. ಈ ಮೊದಲು ಮನೆಯ ಗಂಡಸರು ಕಲ್ಕತ್ತದಲ್ಲಿ ಕೆಲಸ ಮಾಡುತ್ತಿದ್ದರೆ ಹೆಂಗಸರು ರಾಜಸ್ತಾನದಲ್ಲಿ ನೆಲೆಸಿರುತ್ತಿದ್ದರು. ದಾದಿ ಹೇಳುವ ಕಥೆಗಳಿಂದ ಸ್ಥಳಾಂತರದ ವೇದನೆ-ಕಾಠಿಣ್ಯತೆಗಳು ಲೇಖಕಿಗೆ ಅರ್ಥವಾಗಿದ್ದವು. ಇವರು ಮಾರ್ವಾಡಿಗಳ ಅನುಭವ ಹಾಗೂ ಅವರ ಸಮುದಾಯದ ಮಾನಸಿಕ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲು ಹೆಣಗುತ್ತಿದ್ದರು. ಮೊದಲು ತಾವು ಮಾರ್ವಾಡಿ ಎಂದುಕೊಳ್ಳಲು ಇವರಿಗೆ ಪಾಪ ಪ್ರಜ್ಞೆ ಕಾಡುತ್ತಿತ್ತು. ಆದರೆ ಮಾರ್ವಾಡಿಗಳ ಜೀವನ ದೃಷ್ಟಿ ಅವರ ವ್ಯವಹಾರ ಬುದ್ಧಿಯಿಂದ ರೂಪಿತವಾದುದೆಂದು ಅವರಿಗೆ ಅರ್ಥವಾಗಿದೆ. ವ್ಯವಹಾರದಲ್ಲಿ ಯಾವಾಗಲೂ ರಿಸ್ಕ್ ಇರುತ್ತದೆ. ತಮ್ಮೆಲ್ಲ ಸಿರಿ-ಸಂಪತ್ತನ್ನು ರಾತ್ರೋ - ರಾತ್ರಿ ಕಳೆದುಕೊಳ್ಳುವ ಆತಂಕ ಇವರಲ್ಲಿ ಯಾವಾಗಲೂ ಮನೆ ಮಾಡಿರುತ್ತದೆ. ಈ ಆತಂಕವೇ ಅವರ ಜೀವನದೃಷ್ಟಿಯನ್ನು ಬದಲಾಯಿಸಿದೆ ಎಂದು ಲೇಖಕಿ ನುಡಿಯುತ್ತಾರೆ.

ಸ್ಥಳಾಂತರದ ಇತಿಹಾಸ ಕೂಡಾ ಲೇಖಕಿಗೆ ಅತ್ಯಂತ ಕುತೂಹಲ ಹುಟ್ಟಿಸಿದ ಅಂಶ. ಬಯಶಃ ಬಂಗಾಳದ ಹಸಿರು ಹುಲ್ಲಿನ ಪ್ರದೇಶ-ರಾಜಸ್ತಾನದ ಮರುಭೂಮಿಗೆ ಹೊಂದಿಕೊಂಡ ಕಣ್ಣುಗಳನ್ನು ಆಕರ್ಷಿಸಿರಬೇಕು. ಈ ಅಂಶವನ್ನು ಲೇಖಕಿ 'ಕಾಲಿಕಥಾ' ಕಾದಂಬರಿಯಲ್ಲಿ ತೋರಿಸಿದ್ದಾರೆ. ಇವರು ಕಲ್ಕತ್ತಾದ ಇತಿಹಾಸದ ಬಗ್ಗೆ ಆಳವಾದ ಅಧ್ಯಯನ ನಡೆಸಿದ್ದಾರೆ. ಹೀಗೆ ಅಧ್ಯಯನ ನಡೆಸುವಾಗ 70-80 ವರ್ಷದವರೊಡನೆ ಕುಳಿತು ಮಾತು-ಕತೆ ನಡೆಸಿದ್ದಾರೆ. ಒಂದು ಮುಖ್ಯ ಐತಿಹಾಸಿಕ ಸಂಗತಿ ಎಂದರೆ 'ದಿ ಗ್ರೇಟ್ ಕಲ್ಕತ್ತ ಕಿಲ್ಲಿಂಗ್ಸ್'. ಇದು ಭಾರತ ಸ್ವತಂತ್ರ್ಯವಾಗುವ ಸ್ವಲ್ಪ ಮುಂಚೆ, ಹಾಗೂ ಭಾರತ ಇಬ್ಭಾಗ ವಾಗುವ ಒಂದು ವರ್ಷದ ಮುಂಚಿತವಾಗಿ ನಡೆದ ಐತಿಹಾಸಿಕ ಘಟನೆ. ಮತ್ತೊಂದು ಮುಖ್ಯ ಸಂಗತಿ ಎಂದರೆ 'ದಿ ಗ್ರೇಟ್ ಫೆಮೈನ್' ಆಫ್ 43'. ಎರಡನೆಯ ವಿಶ್ವಯುದ್ಧದ ಸಮಯದಲ್ಲಿ ನಡೆದದ್ದು. ಆ ಸಮಯದಲ್ಲಿದ್ದು ಉಳಿದಿರುವವರ ಅನುಭವಗಳ ಪ್ರಕಾರ ಕಲ್ಕತ್ತಾದ ಬೀದಿಗಳಲ್ಲಿ ಸತ್ತವರನ್ನು ನೋಡದೇ ಇರುವವರೇ ಇಲ್ಲ.

ಅಲ್ಕಾ ಸರೌಗಿಯವರು ಕಲ್ಕತ್ತ, ಮಾರ್ವಾಡಿ ಸಮುದಾಯದ ಬಗ್ಗೆ ಅಪಾರ ಆಸಕ್ತಿ ಹೊಂದಿರುವುದು ಕಂಡು ಬರುತ್ತದೆ. ತನ್ನ ದೀದಿಯಂತಹ ಸಾಮಾನ್ಯರ ಮನಸ್ಸನ್ನು ಕೂಡಾ ಈ ಚಳುವಳಿ ಬದಲಾಯಿಸಿದೆ ಎಂಬುದು ಲೇಖಕಿಯ ಅಭಿಪ್ರಾಯ. ಸ್ವತಂತ್ರ್ಯ ಚಳುವಳಿ ಹಾಗೂ ಗಾಂಧೀಜಿ ಸಾಮಾನ್ಯ ಜನರ ಜೀವನದ ದೃಷ್ಟಿಕೋನವನ್ನು ಬದಲಾಯಿಸುವಲ್ಲಿ ಪ್ರಭಾವ ಬೀರಿದ್ದವು ಎಂದೂ ಕೂಡಾ ಲೇಖಕಿ ನುಡಿಯುತ್ತಾರೆ.

'ಕಾಲಿ-ಕಥಾ-ವಯಾ ಬೈ ಪಾಸ್' ಕಾದಂಬರಿಯ ಫಾರಂ unusual ರೀತಿಯದು. ಈ ಆಕೃತಿ ವರ್ತಮಾನದಿಂದ ಭೂತದ ಕಡೆ ಚಲಿಸುವ ಚಲನೆ ಹೊಂದಿದೆ. ಪ್ರತಿ ಚಲನೆಯಲ್ಲಿಯೂ ಭಿನ್ನ ಭಿನ್ನವಾದ ಇತಿಹಾಸವಿರುತ್ತದೆ. ವಿವರಣೆ ಮೊದಲನೇ ವ್ಯಕ್ತಿಯಿಂದ ಮೂರನೆಯ ವ್ಯಕ್ತಿಯವರೆಗೂ ಬದಲಾಗುತ್ತಿರುತ್ತದೆ. ಲೇಖಕಿ ತಮ್ಮ ಸ್ವ-ಪ್ರಜ್ಞೆ ಯನ್ನು ಒತ್ತಟ್ಟಿಗಿಟ್ಟು ವಾಸ್ತವದ ಭ್ರಮೆಯನ್ನು ಕಳಚುತ್ತಾ ಹೋಗುತ್ತಾರೆ. ಜೊತೆಗೆ ಇದು ಕಥೆ ಮಾತ್ರ ಎಂಬುದನ್ನು ಓದುಗರಿಗೆ ಜ್ಞಾಪಿಸುತ್ತಿರುತ್ತಾರೆ. ಮಧ್ಯ ಮಧ್ಯ ಡೈರಿ ಹಾಗೂ ಪತ್ರಗಳನ್ನು ಬಳಸಿಕೊಂಡಿದ್ದಾರೆ. ಆ ಪುಟಗಳಲ್ಲಿ ಮುದ್ರಿತ ಅಕ್ಷರಗಳು ಭಿನ್ನವಾಗಿವೆ. ಈ ರೀತಿಯ ಪ್ರಾಯೋಗಿಕತೆ ಬಂಗಾಳ್ ಅಥವಾ ಹಿಂದಿ ಸಾಹಿತ್ಯದಲ್ಲಿ ನಡದೇ ಇಲ್ಲ. ಇದೊಂದು ಹೊಸದಾದ ಮಾದರಿಯಾಗಿದೆ. ವಿಮರ್ಶಕರು ಹಾಗೂ ಪುಸ್ತಕ ಪರಿಚಯಿಸಿದವರು ಈಕೆಯನ್ನು post modernist ಎಂದು ಕರೆದಿದ್ದಾರೆ. ಈಕೆಯ ಮಾದರಿಯಲ್ಲಿ ಸಲ್‌ಮಾನ್ ರಶ್ದಿಯವರ 'ಮಿಡ್‌ನೈಟ್ಸ್ ಚಿಲ್ಡ್ರನ್' ಪ್ರಭಾವ ಇದೆ ಎಂದೂ ಹೇಳಲಾಗುತ್ತದೆ. ಆದರೆ ಅಲ್ಕಾ ಸರೌಗಿ ತಾವು ಕಾದಂಬರಿಯ ರಚನೆ, ಆಕೃತಿಯ ಬಗ್ಗೆ ಪ್ರತ್ಯೇಕವಾಗಿ ಯೋಚಿಸಿಲ್ಲವೆನ್ನುತ್ತಾರೆ.ಬಹುಶಃ ಇನ್ನಾವರೀತಿಯಲ್ಲೂ ಈ ಕಾದಂಬರಿಯನ್ನು ತಮಗೆ ಬರೆಯಲು ಸಾಧ್ಯವಾಗುತ್ತಿರಲಿಲ್ಲ ಎನ್ನುತ್ತಾರೆ. ಆಕೃತಿ, ರಚನೆಯ ಬಗ್ಗೆ ತಾವು ಪ್ರಜ್ಞಾಪೂರ್ವಕ ಸಿದ್ಧತೆ ನಡೆಸಿಲ್ಲವೆಂದೂ ನುಡಿಯುತ್ತಾರೆ. post modernist ನ ಅರ್ಥ ತಮಗೆ ಆ ಬಗ್ಗೆ ಓದಿದ್ದಾಗ್ಯೂ ಅರ್ಥವಾಗಿಲ್ಲ ಎನ್ನುತ್ತಾರೆ. 'ಮಿಡ್ ನೈಟ್ಸ್ ಚಿಲ್ಡ್ರನ್' ಲೇಖಕಿ ಓದಿದ್ದು ಆ ನಂತರದಲ್ಲಿ. 'ಕಾಲಿಕಥಾ ವಯಾ ಬೈ ಪಾಸ್' ಬರೆಯುವ ಮುಂಚೆ ಅದನ್ನು

ಓದಿದ್ದರೆ ಅದು ಆಕೆಯ ಮೇಲೆ ಪ್ರಭಾವ ಬೀರುತ್ತಿತ್ತೋ ಇಲ್ಲವೋ ಎನ್ನುವುದು ಲೇಖಕಿಗೇ ತಿಳಿದಿಲ್ಲ.

ಈಕೆಯನ್ನು ಮಹಿಳಾ ಲೇಖಕಿ ಎಂದು ಗುರುತಿಸುವ ಬಗ್ಗೆ ಆಕೆಯದೇ ಅದ ಅಭಿಪ್ರಾಯುಗಳಿವೆ. ಸಾಹಿತ್ಯದಲ್ಲಿ ಹೀಗೆ ವಿಭಾಗಗಳಿವೆ ಎಂಬುದೇ ತಮಗೆ ತಿಳಿದಿರಲಿಲ್ಲ ಎಂದು ಅಲ್ಕಾ ಸರೌಗಿ ನುಡಿಯುತ್ತಾರೆ. ರಾಜೇಂದ್ರ ಯಾದವ್‌ರಂತಹ ವಿಮರ್ಶಕರು ಕಾಲಿಕಥಾದಲ್ಲಿ ಸ್ತ್ರೀವಾದಿ ಪ್ರಜ್ಞೆ ಕಾಣೆಯಾಗಿದೆ ಎಂದು ಟೀಕಿಸಿದಾಗ ಅವರು ಅದನ್ನು ಗಂಭೀರವಾಗಿ ಪರಿಗಣಿಸಿದ್ದರು. 'ಕಾಲಿ ಕಥಾ' - ಕಾದಂಬರಿಯನ್ನು ಯಾವ ಗಂಡಸು ಕೂಡಾ ಬರೆಯಬಹುದಾಗಿತ್ತು ಎನ್ನುವುದು ಯಾದವ್‌ರವರ ಟೀಕೆ. 'ಕಾಲಿಕಥಾ' ದಲ್ಲಿ ಬರುವ ವಿಧವೆ ಶಾಂತಾ ಭಾಭಿಯ ಶೋಷಣೆಯೆನ್ನೇ ಬರೆದು ಪ್ರತಿಯೊಬ್ಬ ಮಹಿಳಾ ಲೇಖಕಿಯಿಂದ ನಿರೀಕ್ಷಿಸುವಂತಹ ಮಹಿಳೆಯ ಬಲಿಪಶು ಕಲ್ಪನೆಯ ಕಥೆಯನ್ನು ತಾನು ಬರೆಯ ಬಹುದಿತ್ತು. ಆದರೆ ತಾನು ಬರೆಯಲೆಣಿಸಿದ್ದು ಅದನ್ನೆಲ್ಲ ಎಂದು ಅಲ್ಕಾ ಸರೌಗಿ ನುಡಿಯುತ್ತಾರೆ. ಲಿಂಗ ಅಸಮಾನತೆ ಮಾತ್ರವಲ್ಲ, ಜಾತಿ, ವರ್ಗ, ವಯಸ್ಸು, ಧರ್ಮ ಇಂತಹ ಅನೇಕ ಆಯಾಮಗಳು ಅಸಮಾನತೆಗಿದೆ. ಹಳ್ಳಿ-ನಗರ, ವಿದ್ಯಾವಂತ, ಅವಿದ್ಯಾವಂತರ ನಡುವೆ ಅಸಮಾನತೆ ಇದೆ. ಲೇಖಕಿಗೆ ಇದನ್ನೆಲ್ಲ ಬರೆಯುವ ಸ್ವಾತಂತ್ರ್ಯವಿರಬೇಕು, ಒಂದೇ ಒಂದು ವಿಭಾಗದಲ್ಲಿ ಬರಹಗಾರರು ಬಂಧಿತರಾಗಬಾರದು ಎಂದು ಅಲ್ಕಾ ಸರೌಗಿ ನುಡಿಯುತ್ತಾರೆ.

# ಪಾಪಿ ಹೊಟ್ಟೆ

**ಹಿಂದಿ ಮೂಲ:ನಿರುಪಮಾ ದತ್ ಅವರ 'ಪಾಪಿಪೇಟ್'**

**ಇಂಗ್ಲಿಷ್‌ಗೆ : ಸ್ವದೇಶ್ ದೀಪಕ್**

**ಕನ್ನಡಕ್ಕೆ : ಮುರಳೀಧರ ಖಜಾನೆ**

ಕೆಲವೇ ನಿಮಿಷಗಳಲ್ಲಿ ಹುಡುಗನ ಕಣ್ಣು ಹಸಿದ ನಾಯಿಯ ಕಣ್ಣಿನಂತೆ ಚುರುಕಾಗಿತ್ತು. ಅವನು ಚೂಲೆ ಕುಲ್ಚಾ ತಿನ್ನುತ್ತಿದ್ದವನನ್ನು ರೆಪ್ಪೆ ಮಿಟುಕಿಸದೆ ನೋಡುತ್ತಿದ್ದ. ತಿನ್ನುತ್ತಿದ್ದವನ ಅಂಗೈ ಊಟದ ತಟ್ಟೆಯಷ್ಟೇ ದೊಡ್ಡದಿತ್ತು. ಚೂಲೆ ಇದ್ದ ಎಲೆಯನ್ನು ಆತ ಬಟ್ಟಲಿನಂತೆ ಹಿಡಿದುಕೊಂಡಿದ್ದ. ರೈಲು ಬೋಗಿಯ ಪಕ್ಕದಲ್ಲಿ ನಿಂತಿದ್ದ ಹುಡುಗನ ಮೈ ಸ್ಪ್ರಿಂಗ್‌ನಂತಾಗಿತ್ತು . ಕಳೆದ ಏಳುವರ್ಷಗಳಿಂದ ಅವನ ಸಂಗಾತಿಯಾದ ಹಸಿವು ಅವನಿಗೆ ಈ ರೀತಿ ಸದಾ ಎಚ್ಚರವಾಗಿರುವುದು, ಅವಕಾಶಕ್ಕಾಗಿ ಕಾಯುವುದು ಹಾಗೂ ಗಮನಿಸುವುದನ್ನು ಕಲಿಸಿತ್ತು. ಚೂಲೆ ತಿನ್ನುತ್ತಿದ್ದವನು ಬೋಗಿಯಿಂದ ಎಸೆಯುವ ಎಲೆ ಯಾವ ದಿಕ್ಕಿನಲ್ಲಿ, ಎಷ್ಟುದೂರದಲ್ಲಿ ಬೀಳಬಹುದು ಎಂಬುದನ್ನು ಅವನ ಕಣ್ಣು ಈಗಾಗಲೇ ಲೆಕ್ಕಾಚಾರ ಹಾಕಿತ್ತು.

ಒಂದು ಕ್ಷಣ, ತಿನ್ನುತ್ತಿದ್ದವನ ದೃಷ್ಟಿ, ಹಸಿದ ಕಂಗಳಿಂದ ತನ್ನನ್ನೇ ನೋಡುತ್ತಿರುವ ಹುಡುಗನ ಮೇಲೆ ಬಿತ್ತು. ಆ ನೋಟ ಅವನಲ್ಲಿ ಅಸಹ್ಯ ಹುಟ್ಟಿಸಿತೋ ಅಥವ ಮತ್ತಷ್ಟು ಪಾಪಸಂಘಟನೆ ಮಾಡಿಕೊಳ್ಳುವ ಮನಸ್ಸಾಯಿತೋ ತಿಳಿಯದು. ಅವನು ಚೂಲೆಕುಲ್ಚಾವನ್ನು ಗಬಗಬನೆ ಮುಕ್ಕಿಕೊಳ್ಳತೊಡಗಿದ. ಅವನು ಪ್ರತಿ ತುತ್ತು ಮುಕ್ಕಿದಾಗಲೂ, ಹುಡುಗನ ಎದೆಯಲ್ಲಿ ಚೂರಿಯನ್ನು ಹಾಕಿದಂತಾಗುತಿತ್ತು. ತಿನ್ನುತ್ತಿದ್ದ ಕುಲ್ಚಾವನ್ನು ಮುಗಿಸಿದ ಅವನು, ಇಡೀ ಎಲೆಯನ್ನು ಹೆಬ್ಬೆರಳಿನಿಂದ ಒರೆಸಿ, ನಾಲಿಗೆಯಿಂದ ಚೀಪಿದ. ಸಾಲದೆಂಬಂತೆ ಎಲೆಯ ಎರಡೂ ತುದಿಯನ್ನು ಹಿಡಿದು ನಾಲಿಗೆಯಿಂದ ಚೆನ್ನಾಗಿ ನೆಕ್ಕಿದ. ಹುಡುಗನ ಮನಸ್ಸು ಎಂದಿನಂತೆ ಮುದುಡಿತು. ಎಲೆಯನ್ನು ಪ್ಲಾಟ್ ಫಾರಂ ಮೇಲೆ ಎಸೆದ ಅವನು, ಏನೂ ಆಗದವನಂತೆ ಬೇರೆಡೆ ಮುಖ ತಿರುಗಿಸಿಕೊಂಡು ಕೂತುಬಿಟ್ಟ. ಹುಡುಗನ ಕಣ್ನೋಟ ಎದುರಿಸಲು ಅವನಿಂದ ಸಾಧ್ಯವಿರಲಿಲ್ಲ.

ಹುಡುಗನ ದೇಹ ಸೆಟೆದುಕೊಂಡಿತು. ಎಲೆ ಮೇಲೆ ಸ್ಪ್ರಿಂಗ್‌ನಂತೆ ಹಾರಿದ. ಅವನೆಷ್ಟೇ ನೆಕ್ಕಿದ್ದರೂ, ಎಲೆಯಲ್ಲಿ ಅಲ್ಲಿ ಇಲ್ಲಿ ಚೂರು ಗಸಿ ಅಂಟಿಕೊಂಡಿತ್ತು. ಹಲ್ಲಿಯಂತೆ ಅವನು ಅದೆಲ್ಲವನ್ನೂ ನೆಕ್ಕಿಕೊಂಡ. ರೈಲು ಸಿಳ್ಳೆ ಹಾಕಿತು. ನೂರಾರು ಹಕ್ಕಿಗಳು ಪ್ಲಾಟ್ ಫಾರಂನ ಸೂರಿನಿಂದ ಹೊರಬಂದು ಆಗಸದತ್ತ ಹಾರಿದವು. ರೈಲು ನಿಧಾನವಾಗಿ ನಿಲ್ದಾಣವನ್ನು ಬಿಟ್ಟು ಹೊರಟಿತು.

ಎಲ್ಲ ದಿನಗಳಂತೆ ಹುಡುಗ ಚೂಲೆ ಕುಲ್ಚಾ ಮಾರುವ ಗಾಡಿಯತ್ತ ಹೊರಟ. ಲೋಟ, ತಟ್ಟೆ ತೊಳೆದು, ಬಕೇಟ್‌ನಲ್ಲಿ ನೀರು ತುಂಬಿಟ್ಟರೆ ಅವನಿಗೊಂದು ಕುಲ್ಚಾ ದಕ್ಕುತಿತ್ತು. ಹುಡುಗ ಒಂಟಿ ಕಾಲಲ್ಲಿ ನಿಂತು ಮತ್ತೊಂದು ಕಾಲಿಂದ ಕೆರೆದುಕೊಳ್ಳುತ್ತ ನಿಂತ. ಅವನ ದೃಷ್ಟಿಯೆಲ್ಲ ಚೂಲೆ ಮಾರುವವನ ಮೇಲೇ. ಆದರೆ ಚೂಲೆಕುಲ್ಚಾ ಅಂಗಡಿಯವನು ಈ ಹುಡುಗನನ್ನು ಗಮನಿಸಲೇ ಇಲ್ಲ. ಹುಡುಗ ನಿಂತಿರುವುದು ಅವನಿಗೆ ಗೊತ್ತಿತ್ತು. ಅವನು

ಹೊರಟು ಹೋಗಲಿ ಎಂದೇ ಇವನು ಕಾಯುತ್ತಿದ್ದ. ಹುಡುಗ ಹೋಗುವುದಿಲ್ಲ ಅನ್ನಿಸಿದಾಗ 'ಹೋಗ್ಹೋಗ್, ತೊಳೆಯೋಕೆ ಏನಿಲ್ಲ....'ಎಂದ.

ಆದರೆ ಆ ಹುಡುಗ ಕದಲಲ್ಲಿ.

'ಕೇಳಿಸಲಿಲ್ಲೇನೋ, ? ಕಿವಿಲೇನ್ ಹತ್ತಿ ಇಟ್ಕೊಂಡಿದ್ದೀಯಾ? ರೈಲಿನಲ್ಲಿದ್ದ ಇಬ್ಬರು ಮಾತ್ರ ತಿಂದದ್ದು, ಇನ್ನು ತೊಳೆಯೋಕೆ ಏನಿರುತ್ತೆ ಮಣ್ಣು...'

ಹುಡುಗ ತಲೆ ತಗ್ಗಿಸಿದ.

'ತಾಯ್ಗಂಡ್‌ನನ್‌ಮಗನೇ, ಹೋಗ್ದಿದ್ರೆ ಇಕ್ತೀನಿ ನೋಡು....' ತಲೆ ಎತ್ತಿದ ಹುಡುಗ ಅವನನ್ನು ನೋಡಿದ. ಜನ ತಮ್ಮ ಸಹನೆ ಕಳೆದುಕೊಂಡು ಒದೆಯುವುದು ಯಾವಾಗ ಎಂಬುದು ಆ ಹುಡುಗನಿಗೆ ಚೆನ್ನಾಗಿ ಗೊತ್ತು. ಅವನು ಅಲ್ಲಿಂದ ಕಾಲೆಳೆದುಕೊಂಡು ಹೊರಟ.

ರೈಲ್ವೆ ಸ್ಟೇಷನ್‌ನ ದೀಪಗಳು ಹೊತ್ತಿಕೊಂಡವು. ರಾತ್ರಿಯಾದದ್ದರ ಗುರುತು ಅದು. ಮನೆಗೆ ಹೋಗಲೇಬೇಕು. ಆದರೆ ಅದಕ್ಕೆ ಮೊದಲು ಮತ್ತೆರಡು ಜಾಗಕ್ಕೆ ಅವನು ಹೋಗಲೇಬೇಕು. ಈಗವನು ಟೀಸ್ಟಾಲ್ ಬಳಿ ನಿಂತ. ಟೀ ಮಾಡುವವನು ಟೀ ಕುದಿಸಿದ ಚರಟವನ್ನು ಡಬ್ಬವೊಂದಕ್ಕೆ ಹಾಕುತ್ತಿದ್ದ. ಅದನ್ನು ಹುಡುಗ ಮನೆಗೆ ತೆಗೆದುಕೊಂಡು ಹೋಗಿ ಮತ್ತೆ ಕುದಿಸಿದರೆ ಚರಟದಿಂದ ಮತ್ತೆ ಟೀ ಸಿದ್ಧ. ಹುಡುಗ ಟೀ ಚರಟದ ಡಬ್ಬದತ್ತ ಕೈ ಚಾಚಿದ. 'ಹೋಗಾಚೆ ! ಇದೇನ್ ನಿಮ್ಮಪ್ಪನ್ ಮನೆ ಆಸ್ತಿನಾ?' ಎಂದವನು ಎಲ್ಲ ಭಿಕ್ಷುಕರು ಈ ಟೇಸನ್‌ನ ತಮ್ಮನೆ ಮಾಡಕ್ಕೊಂಡವ್ರೆ....' ಎಂದು ಗೊಣಗಿದ.

ಹುಡುಗನಿಗೆ ಈ ರೀತಿ ಬೈಗುಳ ಅಭ್ಯಾಸವಾಗಿತ್ತು. ಬೈಯ್ಯದೆ ಯಾರಾದರೂ ಏನಾದರೂ ಕೊಡುವುದು ಸಾಧ್ಯವೇ. ಮತ್ತೆ ಚರಟದ ಡಬ್ಬಿ ಯತ್ತ ಕೈಚಾಚಿದ. 'ಏನೋ, ಕಿವಿ ಕೇಳಿಸೊಲ್ಲಾ, ಚರಟ ನಾಳೆ ತೆಗೊಂಡ್ಹೋಗು, ಇವತ್ತಿಂದ ಚರಟ ಎಸೆಯೋಕೆ ಮುಂಚೆ ನಾನು ಮತ್ತೊಂದು ಸಾರಿ ಕುದಿಸ್ತೇನೆ....'

ಹುಡುಗ ಹೊರಟ. ಬೇಸಿಗೆಯ ಬಿಸಿಗಾಳಿಯಲ್ಲಿ ಕಾಗದದ ಚೀಲವೊಂದು ಪ್ಲಾಟ್ ಫಾರಂ ಮೇಲೆ ಹಾರಿಕೊಂಡು ಬಂತು ಹುಡುಗನ ಮುಖದಲ್ಲಿ ನಗೆ ಕಾಣಿಸಿತು. ಅದನ್ನು ಅಟ್ಟಿಸಿಕೊಂಡು ಹೋಗಿ ಹಿಡಿದು. ಬಾಯಿಗಿಟ್ಟು ಅದನ್ನು ಊದಿದ. ಅದು ಬಲೂನಿನಂತೆ ಊದಿಕೊಂಡಿತು. ಅದನ್ನು ನೆಲಕ್ಕೆ ಜಪ್ಪಿದಾಗ ಡಬ್ ಎಂದು ಸದ್ದು ಮಾಡಿ ಒಡೆಯಿತು. ಹುಡುಗ ನಕ್ಕ ಇದುವರೆಗೆ ಕೇಳಿದ್ದ ಬೈಗುಳವೆಲ್ಲ ಮರೆತುಹೋಯಿತು. ಗೋಡೌನ್‌ನತ್ತ ಹೆಜ್ಜೆ ಹಾಕಿದ.

ಗೋಡೌನ್ ತುಂಬ ಕಾಳಿನ ಚೀಲಗಳು. ಈ ಚೀಲಗಳನ್ನು ಗೂಡ್ಸ್‌ರೈಲಿಗೆ ತುಂಬಿ ಕಳುಹಿಸಲಾಗುತ್ತಿತ್ತು. ಅವು ಎಲ್ಲಿಗೆ ಹೋಗುತ್ತವೆ ಎಂಬುದು ಯಾರಿಗೂ ಗೊತ್ತಿರಲಿಲ್ಲ. ಬಿರಿದ ಚೀಲಗಳಿಂದ ಒಂದಷ್ಟು ಕಾಳು ನೆಲದ ಮೇಲೆ ಚೆಲ್ಲಿರುತ್ತಿತ್ತು. ಈ ಕಾಳನ್ನೆಲ್ಲ ಬಾಚಿ, ಅಂಗಿಯ ಮುಂಭಾಗವನ್ನು ಚೀಲದಂತೆ ಮಾಡಿಕೊಂಡು ಮನೆಗೆ ತರುತ್ತಿದ್ದ. ಈ ಕಾಳುಗಳನ್ನು ಅಮ್ಮ ಹೇಗೆ ಹಿಟ್ಟು ಮಾಡಿ ರೊಟ್ಟಿ ಮಾಡುತ್ತಾಳೆ ಎಂಬುದು ಇವತ್ತಿನವರೆಗೂ ಹುಡುಗನಿಗೆ ಅರ್ಥವಾಗಿರಲಿಲ್ಲ.

ಇಬ್ಬರು ಪೋಲೀಸರು ಆ ಗೋಡೋನ್ ಅನ್ನು ಸದಾ ಕಾಯುತ್ತಿದ್ದರು. ಒಬ್ಬ ದೊಡ್ಡ ಮೀಸೆ ಬೆಳೆಸಿ, ಬೊಂಬಿನಂತೆ ಉದ್ದವಾಗಿದ್ದ. ಈ ಹುಡುಗ ಅವನನ್ನು 'ಮೀಸೆ' ಎಂದೇ ಕರೆಯುತ್ತಿದ್ದ. ಹುಡುಗ ಕಾಳು ಗುಡಿಸಿಕೊಳ್ಳುತ್ತಿದ್ದಾಗ ಮೀಸೆ ತಪ್ಪದೆ ತಿಕದ ಮೇಲೆ ಒದೆಯುತ್ತಿದ್ದ. ಮತ್ತೊಬ್ಬ ಗುಂಡುಗುಂಡಗೆ ಇದ್ದ. ಅವನನ್ನು ಈ ಹುಡುಗ ಕರೆಯುತ್ತಿದ್ದುದು ಮಟ್ಕಾ ಎಂದೇ. ಮೀಸೆ ಹುಡುಗನನ್ನು ಒದೆಯುವಾಗಲೆಲ್ಲ ಮಟ್ಕಾ ಅವನನ್ನು ರಕ್ಷಿಸುತ್ತಿದ್ದ. ಹಾಗಾಗಿ ಈ ಹುಡುಗನಿಗೆ ಮಟ್ಕಾ ಇಷ್ಟವಾಗುತ್ತಿದ್ದ. ಈ ಇಬ್ಬರ ಕೈಯಲ್ಲಿಯೂ ಲಾಟಿ ಇರುತ್ತಿತ್ತು. ಗೋಡೋನ್ ಬಾಗಿಲ ಬಳಿ ಇಬ್ಬರೂ ಕುಳಿತು ಬೀಡಿ ಸೇದುತ್ತಿದ್ದರು. ಆದರೆ ಇವತ್ತು ಹುಡುಗ ಗೋಡೋನ್ ಬಳಿ ಹೋಗಲು ಸ್ವಲ್ಪ ಹಿಂಜರಿದ. ಏಕೆಂದರೆ ಇಬ್ಬರೂ ಗೋಡೋನ್ ಬಾಗಿಲ ಬಳಿಯಲ್ಲಿ ಬಂದೂಕು ಹಿಡಿದು ನಿಂತಿದ್ದರು. ಬಂದೂಕಿನ ಬ್ಯಾರೆಲ್ ಮುಂದಿದ್ದ ಕತ್ತಿ ಚೂಪಾಗಿ ಹೊಳೆಯುತ್ತಿತ್ತು. ಹುಡುಗ ಹೆಜ್ಜೆ ಮುಂದಿಟ್ಟಾಗ ಮೀಸೆ ಅವನನ್ನು ನೋಡಿದ. ಹುಡುಗ ಹೆದರಿ ದೂರವೇ ನಿಂತ. ಮೀಸೆ ಅವನನ್ನು ಹತ್ತಿರಕ್ಕೆ ಕರೆದ. ಬಾಗಿಲ ಹತ್ತಿರ ಹೋದಾಗ ಮೀಸೆ ಬಂದೂಕನ್ನು ಅವನತ್ತ ತಿರುಗಿಸಿದ, ಬಂದೂಕಿನ ಚುರಿ ಹುಡುಗನ ಕತ್ತಿನಿಂದ ಒಂದು ಇಂಚು ಮಾತ್ರ ದೂರವಿತ್ತು.

'ಇದೇನ್ ಗೊತ್ತಾ ?

ಗೊತ್ತಿಲ್ಲವೆಂದು ಹುಡುಗ ತಲೆಯಾಡಿಸಿದ.

'ನಾಯಿಮುಂಡೇದೇ ಇದನ್ನು ಬಯೋನೆಟ್ ಅಂತಾರೆ. ಇದನ್ನು ಚುಚ್ಚಿದರೆ ನೇರವಾಗಿ ನಿನ್ನ ಗಂಟಲೊಳಕ್ಕೆ ಇಳಿಯುತ್ತೆ....'

ಹುಡುಗನಿಗೆ ಕಾಲು ನಡುಕ ಬಂದು, ಉಚ್ಚೆಬಂದಂತಾಯಿತು.

'ಯಾಕೋ ಹುಡುಗನ್ನ ಹೆದರಿಸ್ತಿ' ಎಂದು ಮಟ್ಕಾ, ಮೀಸೆಯ ಬಂದೂಕನ್ನು ದೂರ ಸರಿಸಿದ. ಯಾರು ತನ್ನನ್ನು ಗೋಡೋನ್

ಒಳಕ್ಕೆ ಬಿಡಬಹುದೆಂದು ಹುಡುಗ ಈಗ ಕಣ್ಣೆತ್ತಿ ಇಬ್ಬರನ್ನೂ ನೋಡಿದ.

'ಕಾಳು ಬೇಕಾ?'

'ಹೌದು' ಎಂದು ಅವನು ತಲೆಯಲ್ಲಾಡಿಸಿದ.

'ಹಾಗಾದರೆ ಒಳಗ್ಹೋಗು, ಇಲ್ಯಾಕೆ ನಿಂತಿದ್ದೀಯಾ? ನಿನ್ ಅಕ್ಕನ್' ಹುಡುಗ ಒಂದು ಹೆಜ್ಜೆ ಒಳಗಿಡುತ್ತಿದ್ದಂತೆಯೇ ಮೀಸೆ ಅವನ ತಲೆ ಕೂದಲು ಹಿಡಿದೆಳೆದು, ಕುತ್ತಿಗೆಗೆ ಕೈಹಾಕಿ, ಬಲವಾಗಿ ಹುಡುಗನ ಮೂಗು ಹಿಂಡಿದ. ನೋವು ತಡೆಯಲಾಗದೆ ಹುಡುಗ ಬೊಬ್ಬೆ ಹೊಡೆದುಕೊಂಡು. ಆದರೆ ಮೀಸೆ ಬಿಡಲಿಲ್ಲ.ಮತ್ತಷ್ಟು ಬಲವಾಗಿ ಹಿಂಡಿ, ಜೋರಾಗಿ ತಳ್ಳಿದ. ಹುಡುಗ ಹೊಡೆತ ತಿಂದ ನಾಯಿಕುನ್ನಿಯಂತೆ ಕುಂಯ್ಗುಟ್ಟಿದ.

'ನಾಯಿಗುಟ್ದೋನೆ, ಟೇಸನ್‌ಗೆ ಬರಬಾರದು ಅಂತ ನಿಂಗೆ ಗೊತ್ತಿಲ್ವಾ, ನಿನ ಅಮ್ಮನ್, ಗೋಡೋನ್‌ಗೆ ಕದೀಲಿಕ್ಕೆ ಬರ್ತೀಯಾ? ಬಯೋನೆಟ್‌ನ ನಿನ್ನ ಹೊಟ್ಟೆಗ್ಹಾಕ್ತೀನಿ ನೋಡು... ' ಹುಡುಗ ಹೆದರಿಕೆಯಿಂದ ನರಳುವುದನ್ನೂ ಮರೆತ. ಆದರೆ ಮಟ್ಕಾ ಅವನನ್ನು ಬಿಡಿಸಲು ಪ್ರಯತ್ನಿಸದಿರುವುದು ಇಬ್ಬರಿಗೂ ಆಶ್ಚರ್ಯವಾಯಿತು.

'ನಿನ್ನಕ್ಕ ಏನ್ಮಾಡ್ತಾಳೋ?' ಮಟ್ಕಾ ನಯವಾಗಿ ಕೇಳಿದ.

'ಅವಳು ಹಳಿ ಮೇಲೆ ಇದ್ದಲು ಹೆಕ್ತಾಳೆ...'

'ಮಿಂಡ್ರಿ ಗುಟ್ದೋನೆ, ಮತ್ತೇನಾದರೂ ಅವಳ್ನ ರೈಲ್ಹಳಿ ಹತ್ರ ನೋಡಿದ್ರೆ ಅವಳ ಕಾಲ್ ಆಗಲಸ್ತೀನ್ ನೋಡು. ಅಲ್ಲೆಲ್ಲ ಹೋಗ್ಬಾರ್ದು ಅಂತ ಗೊತ್ತಿಲ್ಲಾ...?'

ಮೀಸೆ ಮತ್ತು ಹುಡುಗ ಮತ್ತೆ ಮಟ್ಕಾ ಏನ್ಹೇಳ್ತಾನೆ ಅಂತ ಕಾದರು. 'ಓಡು ಮನೆಗ್ಹೋಗಿ ನಿನ್ ಅಕ್ಕನ್ ಕರ್ಕೊಂಡ್ ಬಾ. ಅವಳು ಚೀಲಾನ್ನೂ ತರ್ಲಿ ಕಾಳು ತುಂಬಿಸಿಕೊಳ್ಳಬಹುದು. ನಿನ್‌ಕೈಲಿ ಚೀಲ ಹೊತ್ಕೊಂಡ್ ಹೋಗೋಕೆ ಆಗೊಲ್ಲ....'

ಕಾಳಿನ ಆಸೆಯಿಂದ ಹುಡುಗ ಮನೆ ಕಡೆ ಓಡಿದ. ಸ್ಟೇಷನ್ ಹೊರಗಿದ್ದ ಸೇತುವೆ ಕೆಳಗಿನ ಕೊಳಚೆ ಗೂಡು ಅದು. ಕತ್ತಲಾಗುತ್ತಿತ್ತು. ಮೋರಿ ಹಾರಿ ಅವನು ಜೋಪಡಿ ಮುಂದೆ ನಿಂತ. ಅಮ್ಮ ನೆಲದ ಮೇಲೆ ಮಲಗಿದ್ದಳು. ಅವಳ ಕತ್ತರಿಸಿದ ಕಾಲಿನಿಂದ ಮಣ್ಣಿನ ಬಣ್ಣದ ಬ್ಯಾಂಡೇಜ್ ಕಾಣುತ್ತಿತ್ತು. ಅಕ್ಕ ಊದುಕೊಳವೆಯಿಂದ ಊದಿ ಮೂರಿಟ್ಟಿಗೆಯ ಒಲೆ ಉರಿಸುವ ಪ್ರಯತ್ನ ಮಾಡುತ್ತಿದ್ದಳು.

'ಕಾಳ್ ತಂದ್ಯೇನ್‌ಲಾ' ಅಮ್ಮನ ಧ್ವನಿ.

'ಇಲ್ಲ'

'ಕಳ್‌ಸೂಳೇಮಗನೆ. ಇಡೀ ದಿನ ಏನ್ಮಾಡ್ದಿ ? ಹುಡುಗ್ರ ಜೊತೆ ಆಡ್ತಿದ್ಯಾ ? ಎಲ್ಡ್ ದಿನದಿಂದ ನಾನ್ ಏನೂ ತಿಂದಿಲ್ಲ ಅಂತ ನಿಂಗೊತ್ತಿಲ್ವಾ....?'

ಅಮ್ಮ ಕಪ್ಪೆಯಂತೆ ತನ್ನೆಲ್ಲ ಭಾರವನ್ನು ಒಂದು ಕಾಲಿನ ಮೇಲೆ ಹಾಕಿ ಕೂತವಳು ಅವನ ಮುಂಗೈ ಹಿಡಿದು ಚೆನ್ನಾಗಿ ಬಡಿದಳು. ಒಲೆ ಊದುತ್ತಿದ್ದ ಅಕ್ಕ ಹತ್ತಿರ ಬಂದು ತಮ್ಮನನ್ನು ಅಮ್ಮನಿಂದ ಬಿಡಿಸಿ ದೂರ ತಳ್ಳಿದಳು. ಅಮ್ಮನ ಕೋಪ ಅಕ್ಕನ ಮೇಲೆ ತಿರುಗಿತು. 'ಏ ಮುಂಡೆ ನೀ ಮಧ್ಯ ಬರ್ಬೇಡ, ನೀನ್ ಅವನಷ್ಟೇ ಕೆಟ್ಟದ್ದೀ. ಇಡೀದಿನ ತಿರುಗಿದ್ದೀ, ಆದ್ರೂ ಒಂತುಂಡೂ ಇದ್ದಿಲು ತಂದಿಲ್ಲ'

ರೈಲಿನ ಚಕ್ರ ಹರಿದು ತನ್ನ ಕಾಲು ಕಳೆದುಕೊಳ್ಳುವವರೆಗೆ ಅಮ್ಮನೇ ಇದ್ದಿಲು ಆರಿಸಿ ತರುತ್ತಿದ್ದಳು. ಈಗ ಆ ಜವಾಬ್ದಾರಿ ಅಕ್ಕನದಾಗಿದೆ. ಆರಿಸಿದ ಇದ್ದಿಲಿನಲ್ಲೇ ಸ್ವಲ್ಪವನ್ನು ಮಾರಿ ಉಪ್ಪು ಕಾರ ಕೊಂಡ್ಕೋತಿದ್ರು.

'ಆ ಪೋಲಿಸ್ನೋರು ಹಳಿ ಹತ್ರ ಯಾರನ್ನೂ ಬಿಡೊಲ್ಲ ಅಂತ ನಿನಗೆ ಸಾವಿರ ಸಾರಿ ಹೇಳಿದ್ದೇನೆ....' ಅಕ್ಕನ ಮಾರುತ್ತರ.

ಹುಡುಗನಿಗೆ ನೆನಪಾಯಿತು.

'ಅಮ್ಮ'

'ಏನೋ ಅದು?'

'ಅವಳ್ನ ನನ್ನ ಜೊತೆ ಗೊಡೋನ್‌ಗೆ ಕಳ್ಸು'

'ಯಾಕೆ?'

'ಅವಳ್ನ ಕರ್ಕೊಂಬಂದ್ರೆ, ಚೀಲದ್ ತುಂಬಾ ಕಾಳು ಕೊಡ್ತೀನಿ ಅಂತ ಪೋಲಿಸ್ನೋರು ಹೇಳವ್ರೆ'

ಅಮ್ಮ ಒಂದು ಕ್ಷಣ ಸುಮ್ಮನಾದಳು. ಅಕ್ಕ ಮತ್ತು ತಮ್ಮ ಅಮ್ಮನನ್ನು ದಿಟ್ಟಿಸಿದರು. ಅಮ್ಮನ ಕಣ್ಣುಗಳು ಮಗಳ ದೇಹದ ಪ್ರತಿ ಭಾಗದ ಮೇಲೂ ಹರಿದಾಡಿತು. ಮಗಳಿಗೆ ಹನ್ನೆರಡು ವರ್ಷ, ಹೆಣ್ತನದ ಲಕ್ಷಣಗಳು ಇನ್ನೂ ಕಂಡಿಲ್ಲ. ಅವಳನ್ನು ಕಳುಹಿಸಲು ಸಾಧ್ಯವಿಲ್ಲ.

ಮತ್ತೆ ಯೋಚನೆ, ಇಂದಲ್ಲ ನಾಳೆ ಇದು ಆಗಲೇ ಬೇಕಲ್ಲ. ಹೀಗೊಂದು ತರ್ಕ, ಆಕೆಯ ಬದುಕು ಇದಕ್ಕಿಂತ ಭಿನ್ನವಾಗೇನೂ ಇರಲಿಲ್ಲ.

'ಮಾರಿ ತೊಳ್ಕೊ ಚೀಲ ತಗೊಂಡು ತಮ್ಮನ್ಜೊತೆ ಹೋಗು'

ಅಕ್ಕ ಹೊರಗಿನ ನಲ್ಲಿ ಬಳಿ ಹೋಗಿ ಮುಖ ತೊಳೆಯುತ್ತಿದ್ದಂತೆ, ತಮ್ಮ ಚೀಲ ಹಿಡಿದು ಸಿದ್ಧವಾಗಿದ್ದ.

ಅಮ್ಮ ಹೇಳಿದಳು 'ಕೇಳಿಲ್ಲಿ ಜಾಸ್ತಿ ಕೂಗಿ ಕಿರುಚಿ ಮಾಡಬೇಡ'

'ನಾನ್ಯಾಕೆ ಕೂಗಿ ಕಿರುಚಿ ಮಾಡಬೇಕು?'

'ಸರಿ ಹೋಗು, ಹಾಳಾಗಿ ಹೋಗು' ಅಮ್ಮ ಮುಖ ತಿರುಗಿಸಿ ಮಲಗಿಕೊಂಡಳು.

ಅಕ್ಕ-ತಮ್ಮ ಗೋಡೋನ್ ನತ್ತ ಹೊರಟರು.

ಮಟ್ಕಾ ತಮ್ಮನನ್ನು ಕರೆದು, 'ಚೂಲೆ-ಕುಲ್ಚಾ' ತಿನ್ಬೇಕಾ?'

ತಮ್ಮನಿಗೆ ಹ್ಞೂಎಂದು ಹೇಳಲೂ ಹೆದರಿಕೆ. ಇವತ್ತು ಈ ಪೋಲಿಸ್ನೋನಿಗೆ ಏನಾಗಿದೆ ?

ಮಟ್ಕಾ ತಮ್ಮನತ್ತ ಚಿಲ್ರೆಕಾಸು ಎಸೆದ. 'ಹೋಗೊ, ಮಗನೆ ಒಂದಷ್ಟು ಚೂಲೆಕುಲ್ಚಾ ತಿಂದು ಮಜಾ ಮಾಡು...'

ಕಾಸು ಕೈಲಿ ಹಿಡಿದ ಹುಡುಗ ಬಾಯಲ್ಲಿಬ್ರೆಡ್ ಕಚ್ಚಿದ ನಾಯಿ ಥರ ಓಡಿದ. ಮೀಸೆ ಹುಡುಗಿ ಪಕ್ಕ ಸರಿದ.

'ಉಸ್ತಾದ್ ಹುಡುಗಿ ತೀರಾ ಎಳಸು'

'ಚಿಂತೆ ಮಾಡಬೇಡ, ಅವಳು ದೋರ್ ಮಾವಿನಕಾಯಿಯಷ್ಟು ಮಜಾ ಕೊಡ್ತಾಳೆ'

'ಇವಳು ತೀರಾ ಚಿಕ್ಕವಳು, ತಡ್ಕೊಂಡಾಳಾ'?

'ಸ್ವಲ್ಪ ಕಾಯಿ, ನಾನು ಒಳಗೆ ಹೋದ ಹತ್ತು ನಿಮಿಷದಲ್ಲಿ ಅವಳನ್ನ ದೊಡ್ಡೋಳನ್ನಾಗಿ ಮಾಡ್ತೇನೆ'

ಮಟ್ಕಾ ಹುಡುಗಿಯನ್ನು ಕರೆದುಕೊಂಡುಹೋದ, ಗೂಡ್ಸ್ ಎಂಜಿನ್ ಗೋಡೋನ್ ಬಳಿ ಹಳಿ ಬದಲಿಸುತ್ತಿತ್ತು. ಹಳ್ಳಿಗಳ ಮೇಲೆ ಚಲಿಸುವ ಚಕ್ರದ ಸದ್ದು ಹಾಗೂ ಸಿಳ್ಳೆ ಎಲ್ಲ ಶಬ್ದಗಳನ್ನು ನುಂಗಿ ಹಾಕಿತ್ತು.

ತಮ್ಮ ಚೂಲೆಕುಲ್ಚಾ ತಿಂದು ಬಂದ. ಮಟ್ಕಾ ಹೊರಗೆ ಹಗ್ಗದ ಮಂಚದ ಮೇಲೆ ಕೂತು ಬೀಡಿ ಸೇದುತ್ತಿದ್ದ.

ಮೀಸೆ ಎಲ್ಲಿ ಹೋದ ಎಂದು ತಮ್ಮ ಅತ್ತಿತ್ತ ಹುಡುಕಾಡಿದ.

'ತಗೋ, ಈ ಬೀಡಿ ಸೇದು' ಎಂದು ಮಟ್ಕಾ ತಮ್ಮನಿಗೆ ಮೋಟು ಬೀಡಿ ಕೊಟ್ಟ. ಅವನು ಆನಂದವಾಗಿ ದಮ್ ಎಳೆದುಕೊಂಡ.

ಮೀಸೆ ಹೊರಕ್ಕೆ ಬಂದ. ಯಾವಾಗಲೂ ಕೋಪದಿಂದ ಕುದಿಯುತ್ತಿದ್ದ ಮೀಸೆ ಮೃದುವಾಗಿದ್ದ. ಸಂತೋಷವಾಗಿದ್ದ.

'ಮಜವಾಗಿತ್ತು ಉಸ್ತಾದ್'

'ಜಾಸ್ತಿ ಮಾತಾಡಬೇಡ, ಅವನ ಚೀಲ ತುಂಬು'

ಮೀಸೆ ಜೊತೆ ತಮ್ಮ ಚೀಲದೊಂದಿಗೆ ಗೋಡೋನ್ ಒಳಕ್ಕೆ ಹೋದ. ಅಕ್ಕ ನೆಲದ ಮೇಲೆ ಮಲಗಿರುವುದನ್ನು ನೋಡಿದ. ಅವನಿಗೆ ಸಿಟ್ಟು ಬಂತು. ಅವಳಿಗೆ ಎಲ್ಲ ಸಲೀಸು. ಇಷ್ಟೊತ್ತಿಗೆ ಕಾಳು ಯಾಕೆ ಆರಿಸಿಲ್ಲ: ಈಗ ನಾನೇ ಎಲ್ಲ ಮಾಡಬೇಕು ಎಂಬ ಕೋಪ.

ತಮ್ಮ ತನ್ನ ಪುಟ್ಟ ಕೈಗಳಿಂದ ಕಾಳು ತುಂಬಿಕೊಳ್ಳ ತೊಡಗಿದ. ಮೀಸೆ ಅವನನ್ನು ತಡೆದ. ತನ್ನ ಬಂದೂಕಿನ ಬಯೋನೆಟ್‌ನಿಂದ ಕಾಳಿನ ಮೂಟೆಯನ್ನು ಚುಚ್ಚಿದ ಕಾಳು ನಲ್ಲಿಯಲ್ಲಿ ತೆಳ್ಳಗೆ ಬರುವ ನೀರಿನಂತೆ ಚೀಲದಿಂದ ಹೊರಕ್ಕೆ ಸುರಿಯ ತೊಡಗಿತು. ಮೀಸೆ ಚೀಲವನ್ನು ಮೂಟೆಯ ತೂತಿನ ಬಾಯಿಗೇ ಹಿಡಿದ. ಕೆಲವೇ ನಿಮಿಷಗಳಲ್ಲಿ ಅದು ತುಂಬಿಕೊಂಡಿತು.

ಅಕ್ಕ ಹೊರಗೆ ಕಾದು ನಿಂತಿದ್ದಳು. ಅವರು ಮನೆಯತ್ತ ಹೊರಟರು.

'ಬೇಗ ನಡಿ' ಎಂದ ತಮ್ಮ

ಅಕ್ಕ ಕುಂಟತೊಡಗಿದಳು. ಒಂದೊಂದು ಹೆಜ್ಜೆ ಇಡುವುದು ಅವಳಿಗೆ ಯಾತನೆಯಾಗಿತ್ತು. ತಮ್ಮ ಮುಂದೆ ಹೊರಟ. ಮತ್ತೆ ನಿಂತು ಹಿಂದಕ್ಕೆ ನೋಡಿದ. ಅಕ್ಕ ನಿಧಾನವಾಗಿ ನಡೆದು ಬರುತ್ತಿದ್ದಳು. 'ಬೇಗ ನಡೆಯೋಕೆ ಆಗೊಲ್ವಾ' ರೇಗಿದ. ಅಕ್ಕ ಅವನನ್ನು ಸಿಟ್ಟಿನಿಂದ ನೋಡಿದಳು. ತನ್ನೆಲ್ಲ ಶಕ್ತಿಯನ್ನು ಸೇರಿಸ ಕೆನ್ನೆಗೊಂದು ಬಾರಿಸಿದಳು. ತಮ್ಮ ಅಳುವುದನ್ನು ಮರೆಯುವಷ್ಟು ಹೆದರಿಹೋದ.

ಜೋಪಡಿಯೊಳಕ್ಕೆ ಹೋದ ಅಕ್ಕ ಕಡಿದ ಮರದಂತೆ ಕುಸಿದಳು. ತನ್ನ ಕಾಲುಗಳೆರಡನ್ನೂ ಅವುಚಿಕೊಂಡು ನರಳಿದಳು. ಅಮ್ಮ ತೆವಳಿಕೊಂಡು ಮಗಳ ಬಳಿಗೆ ಬಂದವಳು, ಒಲೆಯಿಂದ ಕಾದ ಇಟ್ಟಿಗೆಯನ್ನು ಹೊರಕ್ಕೆ ತೆಗೆದು ಬಟ್ಟೆಯಲ್ಲಿ ಸುತ್ತಿ ಅಕ್ಕನ ಕಾಲುಗಳ ಮಧ್ಯೆ ಇಟ್ಟು ತೆಗೆದು ಮಾಡಿದಳು. ಅಮ್ಮನ ಕೈತಾಗಿದಂತೆ ಅಕ್ಕ ಅಳಲು ಆರಂಭಿಸಿದಳು. ತಮ್ಮನಿಗೆ ಸಿಟ್ಟು ಬಂತು. ಅಮ್ಮನಿಗೆ ಹುಚ್ಚು ಹಿಡಿದಿರಬೇಕು ಎಂದುಕೊಂಡ. ಕಾದ ಇಟ್ಟಿಗೆ ಅಕ್ಕನನ್ನು ಸುಡುತ್ತಿರಬೇಕು ಎಂದುಕೊಂಡ.

ಕಾಳಿನ ಚೀಲ ಎರಡೇ ದಿನದಲ್ಲಿ ಬರಿದಾಯಿತು. ಅಕ್ಕ ಇಡೀ ದಿನ ನೆಲದ ಮೇಲೆ ಮಲಗಿಯೇ ಇದ್ದಳು. ಸಂಜೆ ಅಮ್ಮ ಚೀಲವನ್ನು ತಮ್ಮನ ಹೆಗಲಿಗೆ ಹಾಕಿದಳೂ 'ಗೋಡೋನ್‌ನಿಂದ ಕಾಳು ತೆಗೊಂಡು ಬಾ'

'ನಾನು ಹೋಗೋಲ್ಲ, ನಾನೊಬ್ನೇ ಹೋದ್ರೇ, ಪೊಲೀಸ್ನೋರು ಹೊಡಿತಾರೆ. ಅವಳ್ನೂ ನನ್ನ ಜೊತೆ ಕಳ್ಸು. ಅವಳು ನನ್ನೊತೆ ಇದ್ರೆ ಚೂಲೆ ಕುಲ್ಚ ತಿನ್ನೋಕೆ ಕಾಸು ಕೊಡ್ತಾರೆ.

ಅಮ್ಮ ಏಳುವ ಮುಂಚೆಯೇ ತಮ್ಮ ಜೋಪಡಿಯಿಂದ ಓಡಿದ.

ಅಮ್ಮನಿಗೆ ತನ್ನನ್ನು ಹಿಡಿಯುವುದು ಸಾಧ್ಯವಿಲ್ಲವೆಂದು ಅವನಿಗೆ ಗೊತ್ತು. ಅಮ್ಮ ಈಗ ಹುಷಾರಾದಳು.

ನಾಜೂಕಾಗಿ 'ಕೇಳಿಲ್ಲಿ, ಅಕ್ಕನಿಗೆ ಹುಷಾರಿಲ್ಲ. ಅವಳಿಂದ ಏಳೋಕೆ ಆಗೊಲ್ಲ. ಅವಳು ಹುಷಾರಾದ ಮೇಲೆ ಬರ್ತಾಳೆ ಅಂತ ಪೊಲೀಸ್ನೋರಿಗೆ ಹೇಳು'

ತಮ್ಮನಿಗೆ ಅರ್ಥವಾಯಿತು. ಎರಡು ದಿನದಿಂದ ಅಕ್ಕ ಮೇಲೆ ಏಳದಿದ್ದನ್ನು ಅವನು ನೋಡಿದ್ದ.

ಗೋಡೋನ್ ಹತ್ರ ಹೋದಾಗ, ಅವವನ್ನು ಹಿಡಿದು ಮೀಸೆ ಕೇಳಿದ ಎಲ್ಲಿ ಸತ್ಪೋ ನಿನ್ನಕ್ಕ ನಿನ್ನೊಜ್ತೆ ಅವಳ್ಯಾಕೆ ಬರಲಿಲ್ಲ.

'ಅವಳಿಗೆ ಹುಷಾರಿಲ್ಲ'

'ತಾಯ್ಗಂಡ್‌ನನ್‌ಮಗನೇ....ಸುಳ್ ಹೇಳ್ತೀಯಾ' ಎಂದು ಮೀಸೆ ಕೈ ಎತ್ತುವ ವೇಳೆಗೆ ಮಟ್ಕಾ ಅವನನ್ನು ತಡೆದ.

'ಅವನು ನಿಜ ಹೇಳ್ತಿದ್ದಾನೆ. ಅಕ್ಕನಿಗೆ ಹುಷಾರಿರಲಿಕ್ಕಿಲ್ಲ. ಅಡ್‌ಕಸುಬಿ ಥರ ಆಡ್ತಿಯಲ್ಲ'

ಮಟ್ಕಾ ಬಂದದ್ದರಿಂದ ಹುಡುಗನಿಗೆ ಸ್ವಲ್ಪ ಸಮಾಧಾನವಾಯ್ತು.

'ಅಕ್ಕನಿಗೆ ಹುಷಾರಾದ ಕೂಡಲೇ ನನ್ನೊಜ್ತೆ ಬರ್ತಾಳೆ ಅಂತ ಅಮ್ಮ ಹೇಳಿದ್ಳು' ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ. ಮೀಸೆ ಮಾತ್ರ ಉರಿಯುತ್ತಿದ್ದ. ಅವನಿಗೆ ಇನ್ನೂ ಸಿಟ್ಟು ಕಮ್ಮಿ ಆಗಿರಲಿಲ್ಲ.

'ಏನಾಯ್ತು' ಮಟ್ಕಾ ಕೇಳಿದ.

'ಒತ್ತುತ್ತಾ ಇದೆ....' ಎಂದ ಮೀಸೆ.

'ಇವತ್ತು ಈ ಹುಡುಗನ್ನ ರುಚಿ ನೋಡೋಣ್ವಾ....'

ಮೀಸೆ ಕಾದು ಕೆಂಪಾಗಿದ್ದ.

:ಆದ್ರೆ ಇವನು ಕೊಳ್ತುನಾರ್ತಾ ಇದಾನಲ್ಲ'

'ವ್ಹಾ !ಇಂಗ್ಲಿಷ್ ನನ್ಮಗನೇ, ಒಂದು ತುಂಡು ಸೋಪ್ ತೆಗೊಂಡ್ ಬಾ. ಹುಡುಗ ಒಳ್ಳೆ ಸ್ನಾನ ಮಾಡಲಿ'

ಮೀಸೆ ತುಂಡು ಸಾಬೂನು ತಂದ.

'ಹೋಗೋ ಮಗನೆ, ಪಂಪ್ ಹತ್ರ ಹೋಗಿ ಚೆನ್ನಾಗಿ ತಿಕ್ಕ ತೊಳ್ಕೊ...'

ಹುಡುಗ ಬಟ್ಟೆ ತೆಗೆದು ಪಂಪ್ ಕೆಳಗೆ ಕೂತ. ಮಟ್ಕಾ ಪಂಪ್‌ನ ಹಿಡಿ ಒತ್ತ ತೊಡಗಿದ. ಹುಡುಗನ ಬಟ್ಟೆ ಕಡೆ ನೋಡಿ ಮೀಸೆಗೆ ಕಣ್ಣಲ್ಲೇ ಸನ್ನೆ ಮಾಡಿದಾಗ ಮೀಸೆ ಬಟ್ಟೆ ತೆಗೊಂಡು ಗೊಡೋನ್ ಒಳಕ್ಕೆ ಹೋದ.

ಹುಡುಗ ಸ್ನಾನ ಮಾಡಿ ಸುತ್ತಲೂ ನೋಡಿ 'ಎಲ್ಲಿ ನನ್ನ ಬಟ್ಟೆ' ಅಂತ ಕಿರುಚಿದ. 'ಗೋಡೋನ್ ಒಳಗ್ಹೋಗಿ ಹಾಕ್ಕೋ'

ಹುಡುಗ ಗೊಡೋನ್ ಒಳಕ್ಕೆ ಹೋದ. ಇಬ್ಬರೂ ಅವನನ್ನು ಹಿಂಬಾಲಿಸಿ, ಬಾಗಿಲು ಮುಚ್ಚಿದರು. ಮಟ್ಕಾ ಹುಡುಗನ ಕುತ್ತಿಗೆ ಹಿಡಿದೊತ್ತಿ ಬಗ್ಗಿಸಿದ. ಹುಡುಗ ನಾಯಿ ಥರ ನಾಲ್ಕು ಕಾಲ ಮೇಲೆ ನಿಂತ. ಗೊಡೋನ್ ತಿದಿ ಥರ ಉರಿಯುತ್ತಿತ್ತು. ಹುಡುಗನ ನಾಲಿಗೆ ಹೊರಕ್ಕೆ ಬಂದಿತ್ತು. ನಾಯಿ ಥರ ಕುಂಯ್ಗುಡುತ್ತಿದ್ದ.

ಭಯವೋ, ಬಿಸಿಯೋ ಗೊತ್ತಿಲ್ಲ.

ಹೊರಗೆ ವಾತಾವರಣ ಎಂದಿನಂತೆಯೇ ಇತ್ತು ಎಂಜಿನ್‌ನ ಶಿಳ್ಳೆ, ಹಳಿ ಬದಲಾಯಿಸುವ ಚಕ್ರಗಳು.

# ಶೋಷಿತ ಮಹಿಳೆಯರು

ಯಶೋದ

ಅಸಂಘಟಿತ ಕ್ಷೇತ್ರದಲ್ಲಿ ಕೆಲಸ ಮಾಡುವ ಕಾರ್ಮಿಕರ ಜೀವನ ದುಸ್ಥರವಾದುದು. ಅವರಿಗೆ ಜೀವನದಲ್ಲಿ ಯಾವುದೇ ಭದ್ರತೆಯಿಲ್ಲ. ಸದಾ ಆತಂಕದಲ್ಲಿಯೇ ಕೆಲಸ ಮಾಡಬೇಕಾಗುತ್ತದೆ. ಸಂಘಟಿತ ಕ್ಷೇತ್ರದಲ್ಲಿ ಇರುವ ಸೌಲಭ್ಯಗಳಿಂದ ಇವರು ವಂಚಿತರಾಗಿರುತ್ತಾರೆ. ವಿಶೇಷವಾಗಿ ಮಹಿಳಾ ಕಾರ್ಮಿಕರ ಶೋಷಣೆ ವರ್ಣಿಸಲು ಅಸಾಧ್ಯವಾದುದು.

ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳಾ ಕಾರ್ಮಿಕರ ಜೀವನ ದಯನೀಯವಾದುದು. ಮೂಲಭೂತ ಸೌಕರ್ಯಗಳಿಂದ ಅವರು ವಂಚಿತರಾಗಿದ್ದಾರೆ. ಮಾನವ ಹಕ್ಕುಗಳಿಗೆ ಇಂತಹ ಖಾಸಗೀ ಕಾರ್ಖಾನೆಗಳಲ್ಲಿ ಅವಕಾಶವೇ ಇಲ್ಲ.

ಬಹುಪಾಲು ಕಾರ್ಖಾನೆಗಳಲ್ಲಿ ಇ.ಎಸ್.ಐ,ಪಿ. ಎಫ್, ಸೌಲಭ್ಯ ರಜೆಯ ಹಕ್ಕು ಬೋನಸ್, ಕನಿಷ್ಠವೇತನ ಶೌಚಾಲಯದ ವ್ಯವಸ್ಥೆ ಶಿಶುಪಾಲನಾ ಕೇಂದ್ರ, ಸೂಕ್ತ ಸಾರಿಗೆ ವ್ಯವಸ್ಥೆ ಯಾವುದೂ ಇಲ್ಲ. ಸರ್ಕಾರಿ ರಜೆಯು ಇವರಿಗೆ ಅನ್ವಯ ವಾಗುವುದಿಲ್ಲ. 'ಉತ್ಪಾದನಾ ಗುರಿ' ಯನ್ನು ನಿಗದಿ ಮಾಡಲಾಗುತ್ತದೆ. ಆಡಳಿತಾಧಿಕಾರಿಗಳು ಪುರುಷರಾಗಿರುವುದರಿಂದ ಮಹಿಳೆಯರ ಮೇಲೆ ದೌರ್ಜನ್ಯ ಹಾಗೂ ಲೈಂಗಿಕ ಕಿರುಕುಳ ನೀಡಲಾಗುತ್ತದೆ.

ಕಾರ್ಖಾನೆಗೆ ಹೋಗುವ ಮಹಿಳೆಯರು ಮನೆಗೆಲಸ ಮಾಡಿ, ಕಾರ್ಖಾನೆಗಳಿಗೆ ಹೋಗಿ ಅಲ್ಲಿ ಸುಮಾರು 10 ಗಂಟೆಗಳ ಕಾಲ ದುಡಿದು ಮನೆಗೆ ಬರಬೇಕಾಗುತ್ತದೆ. ಪುನಃ ಮನೆ ಕೆಲಸ

ಅವರಿಗಾಗಿ ಕಾದಿರುತ್ತವೆ. ಹೀಗೆ ಆಕೆ ಮನೆಯಲ್ಲಿ ಸುಮಾರು 6 ಗಂಟೆಗಳಿಗಿಂತ ಹೆಚ್ಚು ದುಡಿಯುತ್ತಾಳೆ. ಗಂಡನಾದವನು ಮನೆಯಲ್ಲಿ ಯಾವುದೇ ಜವಾಬ್ದಾರಿಯನ್ನು ತೆಗೆದುಕೊಳ್ಳದೇ ಇರುವುದರಿಂದ ಆಕೆಯ ಮೇಲೆ ಎಲ್ಲಾ ಜವಾಬ್ದಾರಿಯನ್ನು ಹಾಕಲಾಗುತ್ತದೆ. ಹೆಂಡತಿಯಾದವಳು ಗಂಡನಿಂದ ಮಾನಸಿಕ ಹಾಗೂ ದೈಹಿಕ ಹಿಂಸೆಯನ್ನು ಸಹ ಸಹಿಸಿಕೊಳ್ಳಬೇಕು. ಮಕ್ಕಳ ಮುತುವರ್ಜಿಯನ್ನು ಸಹ ತಾಯಿಯಾದವಳೇ ವಹಿಸಿಕೊಳ್ಳಬೇಕು.

ಗಾರ್ಮೆಂಟ್ಸ್ ಕಾರ್ಖಾನೆಯಲ್ಲಿ ದುಡಿಯುವ ಮಹಿಳೆಯರನ್ನು ಸಮಾಜ ಕೀಳು ದೃಷ್ಟಿಯಿಂದ ನೋಡುತ್ತದೆ. ಕಾರ್ಖಾನೆಯಲ್ಲಿ ಹಾಗೂ ಕೆಲಸಕ್ಕೆ ಹೋಗಿಬರುವ ಸಂದರ್ಭದಲ್ಲಿ ಅವಳನ್ನು ಕೆಟ್ಟ ದೃಷ್ಟಿಯಿಂದ ನೋಡಲಾಗುವುದಲ್ಲದೇ ಆಕೆಯನ್ನು ಹೀಯಾಳಿಸಲಾಗುತ್ತದೆ.

ಬಹುಪಾಲು ಮಹಿಳೆಯರು ಗಾರ್ಮೆಂಟ್ಸ್ ಕೆಲಸಗಳಿಗೆ ಹೋಗುತ್ತಾರೆ. ಹೀಗೆ ಈ ಕೆಲಸಕ್ಕೆ ಹೋಗುವ ಮಹಿಳೆಯರು ಅನಾರೋಗ್ಯದಿಂದ ಬಳಲುತ್ತಾರೆ. ಅವರು ಸಾಮಾನ್ಯವಾಗಿ ಪೌಷ್ಠಿಕಾಂಶದ ಕೊರತೆಯಿಂದ ನರಳುತ್ತಾರೆ. ಅವರು ಕೆಲಸ ಮಾಡುವ ವಾತಾವರಣ, ಬಟ್ಟೆಯ ದೂಳಿನಿಂದ ಕೂಡಿರುತ್ತದೆ. ಅವರು ಸದಾ ಇದೇ ಗಾಳಿಯನ್ನು ಉಸಿರಾಡುವುದರಿಂದ, ಉಸಿರಾಟದ, ಹಾಗೂ ಹೃದಯದ ತೊಂದರೆ ಕಂಡು ಬರುತ್ತದೆ. ಬೆಳಿಗ್ಗೆಯಿಂದ ಸಂಜೆಯವರೆಗೆ ಅವರು ನಿಂತೇ ಕೆಲಸ ಮಾಡಬೇಕಾಗುತ್ತದೆ. ಬಹುಪಾಲು ಹೆಣ್ಣು ಮಕ್ಕಳು ಬೆನ್ನು ನೋವಿನಿಂದ ನರಳುತ್ತಾರೆ. ಪವರ್ ಮಿಷನ್‌ನಲ್ಲಿ ಕೆಲಸ ಮಾಡುವ ಮಹಿಳೆಯರು ಅತಿರಕ್ತ ಸ್ರಾವ ಹಾಗೂ ಬಿಳಿ ಹೋಗುವುದು ಹೆಚ್ಚಾಗಿರುತ್ತದೆ. ಕೆಲವು ಮಹಿಳೆಯರಿಗೆ ಗರ್ಭ ಪಾತವೂ ಸಹ ಆಗುತ್ತದೆ.

ಗಾರ್ಮೆಂಟ್ಸ್ ಕಾರ್ಮಿಕರಿಗೆ ಸಿಗಬೇಕಾದ ಮೂಲಭೂತ ಸೌಕರ್ಯಗಳನ್ನು ಹಾಗೂ ಮಾನವ ಹಕ್ಕುಗಳನ್ನು ಒತ್ತಾಯಿಸಿ ಮೇ 1, ಕಾರ್ಮಿಕ ದಿನಾಚರಣೆಯ ದಿನದಂದು ಪ್ರತಿಭಟನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಈ ಪ್ರತಿಭಟನೆಯ ಕಾರ್ಯಕ್ರಮದಲ್ಲಿ ಹಲವಾರು ಸಮಾಜದ ಹೋರಾಟಗಾರರು, ಕಾರ್ಯಕರ್ತರು, ಮುಖಂಡರು ಮತ್ತು ಕಾರ್ಮಿಕರು ಭಾಗವಹಿಸಿದ್ದರು.

ಮೊದಲಿಗೇ ಈ ಕಾರ್ಯಕ್ರಮವನ್ನು ಸ್ವಾಗತಿಸಿದವರು ಶ್ರೀ.ಮುತ್ತಪ್ಪನವರು.

ಸಂಘಟನೆಯ ಹೋರಾಟಗಾರ ಹೋರಾಟ ಹಾಡುಗಳನ್ನು ಹಾಡಿದರು.

ಶ್ರೀ ಲಕ್ಷ್ಮಣ.ಜಿ. ಯವರು 'ದುಡಿಮೆಯ ಬದುಕು' ಎಂಬ ಪತ್ರಿಕೆಯನ್ನು ಬಿಡುಗಡೆ ಮಾಡಿದರು. ಪತ್ರಿಕೆಯನ್ನು ಹಾಗೂ ಕಾರ್ಮಿಕರ ಸಮಸ್ಯೆಗಳನ್ನು ಉದ್ದೇಶಿಸಿ ಮಾತನಾಡಿದರು.

ಮಾನವ ಹಕ್ಕುಗಳ ಹೋರಾಟಗಾರರಾದ ಶ್ರೀ ಹಸನ್ ಮನ್ಸೂರ್ ರವರು, ಕಾರ್ಮಿಕರ ಹಕ್ಕುಗಳ ಬಗ್ಗೆ ಕುರಿತು ಮಾತನಾಡಿದರು.

ಪ್ರತಿಭಟನಾಕಾರರು ಬಂಡವಾಳ ಶಾಹಿಗಳ ವಿರುದ್ಧ ಹಾಗೂ ಮಾಲಿಕರು ಮತ್ತು ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗಿದರು.

ಮುಖ್ಯ ಹೋರಾಟಗಾರರಾದ ಶ್ರೀ ಈರಣ್ಣನವರು ಗಾರ್ಮೆಂಟ್ಸ್ ಮತ್ತು ಸಾಮಾನ್ಯ ಕಾರ್ಮಿಕರ ಮೇಲೆ ನಡೆಯುತ್ತಿರುವ ಶೋಷಣೆ ಮತ್ತು ದೌರ್ಜನ್ಯವನ್ನು ವಿರೋಧಿಸಿ ಮಾತನಾಡಿದರು.

ಪತ್ರಕರ್ತರಾದ ಶ್ರೀಮತಿ ಸುಜಾತ ಕಮಟರವರು ಮಹಿಳೆಯರಿಗೆ ಆಗುತ್ತಿರುವ ಲೈಂಗಿಕ ದೌರ್ಜನ್ಯ ಮತ್ತು ಮನೆಯಲ್ಲಿ ಆಗುತ್ತಿರುವ ದೈಹಿಕ ಮತ್ತು ಮಾನಸಿಕ ಹಿಂಸೆ ಹಾಗೂ ಸಮಾಜದಿಂದ ಆಗುತ್ತಿರುವ ಹಿಂಸೆಗಳನ್ನು ಕುರಿತು ಮಾತನಾಡಿದರು.

ಗುತ್ತಿಗೆ ಪೌರ ಕಾರ್ಮಿಕರ ವತಿಯಿಂದ ಶ್ರೀಮತಿ ಜಯಮ್ಮನವರು ಕನಿಷ್ಠ ವೇತನದ ಬಗ್ಗೆ ಮಾತನಾಡಿದರು ಮತ್ತು ಆಡಳಿತ ವರ್ಗದಿಂದ ಆಗುತ್ತಿರುವ ಹಿಂಸೆಯ ಬಗ್ಗೆ ಮಾತನಾಡಿದರು.

ಹಿರಿಯ ಕಾರ್ಮಿಕರ ಮುಖಂಡರಾದ ಶ್ರೀ.ಬಾಲಕೃಷ್ಣರವರು ಕಾರ್ಮಿಕರ ಜಾಗೃತಿಯ ಬಗ್ಗೆ ಮಾತನಾಡಿದರು. ಕಾರ್ಮಿಕರು ಸಂಘಟಿತರಾಗ ಬೇಕು. ಕಾರ್ಮಿಕರನ್ನು ಉದ್ದೇಶಿಸಿ ಮಾತನಾಡಿದರು.

ಗಾರ್ಮೆಂಟ್ಸ್ ಕಾರ್ಮಿಕ ಸಂಘದ ಕಾರ್ಯದರ್ಶಿಯವರಾದ ಶ್ರೀ ಮುತ್ತಪ್ಪನವರು, ಕಾರ್ಮಿಕರ ಹಕ್ಕು ಹಾಗೂ ಆ ಹಕ್ಕುಗಳನ್ನು ಸರ್ಕಾರಕ್ಕೆ ಮಂಡಿಸಿದರು. ತಮ್ಮ ಬೇಡಿಕೆಗಳನ್ನು ಸರ್ಕಾರಕ್ಕೆ ಮನವಿ ಸಲ್ಲಿಸಿದರು.

# ಶಿಲಾಬಾಲಕಿ

ಸ್ವಚ್ಛಂದ ಗಾಳಿಗೆ ಮೈಯೊಡ್ಡುತ
ಅಲ್ಲೆಲ್ಲೊ ಬಿದ್ದಿತ್ತು ಕಲ್ಲುಬಂಡೆ
ಬಿದ್ದ ಜಡಿ ಮಳೆಗೂ ಕುಗ್ಗದೆ
ಎದ್ದ ಬಿರುಗಾಳಿಗೂ ಜಗ್ಗದೆ
ಶತಶತಮಾನಗಳಿಂದನಿಂತೆಯೇ ಇದ್ದ
ಹೆಬ್ಬಂಡೆಯಂತಹ ಹೆಬ್ಬಂಡೆ
ಮೇಣವಾಯ್ತು ಉಳಿ ಹಿಡಿದು
ಬಂದವನ ಸ್ಪರ್ಶಕೆ
ಪುಂಗಿನಾದಕೆ ಸೋತ ನಾಗನಂತೆ
ಇಡೀ ಮೈಯೊಡ್ಡಿ ನಿಂತಿತು
ಅವಕೈಯಾಡಿಸಿದಂತೆಲ್ಲ
ಪುಳಕ, ನಡುಕ, ರೋಮಾಂಚನ
ಮೃದು ಮಧುರ, ನವಿರನ ಸಿಂಚನ
ಮರೆತು ಎಲ್ಲವನ್ನೂ ಮರೆತು
ಅವ ಚಿತ್ತವಾಗಿಸಿದಂತೆಲ್ಲ
ಯೌವನದ ಭಾರಕೆ ಜಗ್ಗುತ
ನಾಚಿಕೆಯಲಿ ಕಂಪಿಸಿತು.
ಬಟ್ಟಬಯಲಾಗಿಸುವ ಹುನ್ನಾರ
ತಿಳಿಯದ ಹೆಬ್ಬಂಡೆ
ಈಗ ಬೆತ್ತಲೆ ಗೊಂಬೆ
ಹೆಣ್ತನವನ್ನೆಲ್ಲ ಬಯಲಿಗಿಟ್ಟ
ನಿರ್ದಯಿ ಶಿಲ್ಪಿ
ಬೆತ್ತಲಾದಚಂದವನು
ಮುಚ್ಚಿಕೊಳ್ಳಲಾರದ
ನಿಸ್ಸಾಹಾಯಕಿ ಈ ಶಿಲಾ ಬಾಲೆ

ಎನ್. ಶೈಲಜಾ ಹಾಸನ್

# ಆಭರಣ ರಾಶಿ

ಮಂಗನ ಕೈಯಲ್ಲಿ
ಚೆಲ್ಲಿದೆ ರಾಶಿ ಆಭರಣ
ಕಂಡಲ್ಲಿ ಇಡುವುದು
ಕೆಂಡದ ಮೇಲೆ ಹಾದು
ಚೆಂಡಿಯ ಕುತ್ತಿಗೆಗೆ
ಆಭರಣ
ಮಂಗನ ಚೇಷ್ಟೆ ನೋಡಿ
ತೆಗೆಯುವುದು ಹಾಕುವುದು
ಅದಲು-ಬದಲು ಬಯಲಾಟ
ಕೂತಲ್ಲೇ ತಿನ್ನುವುದು
ಮೆದುಳುಗಳ ರಾಶಿ
ಕಂಡಲ್ಲಿ ಹಾರುವುದು
ಕನ್ನಡಿಯ ಇಟ್ಟು
ನೋಡುವುದು ಅಲ್ಲಲ್ಲಿ
ಅದರದೇ ಜೀವರಾಶಿ
ಗಾಳದಲ್ಲಿ ಸಿಕ್ಕವು
ಜೀವಗಳ ಬಿಟ್ಟವು
ಭಾರಿ, ಮೈ ಮಾಂಸಗಳ
ಚೆಂಡುಗಳು
ಬೊಜ್ಜು ಕರಗಿಸಲು
ಆಡಬಹುದು ಆಟಗಳ
ನೀರಿನಿಂದ ಬೇರ್ಪಟ್ಟು
ಉಪ್ಪು ರಾಶಿಯ
ಮಧ್ಯ ಮೂಳೆ, ಮಾಂಸದ
ಉಸಿರಾಟ
ಬಿದ್ದ ಆಭರಣದ ರಾಶಿ
ಚೆಲ್ಲುವ ಕಂಪ್ಯೂಟರ್‌ಗು
ಇರಲಿ ರಾತ್ರಿ ಪೂರ್ತಿ
ರಾಜ, ರಾಣಿ, ಜೋಕರ್‌ಗಳ
ಆಟ
ಕಂಡಲ್ಲಿ ಅಂಡು
ಉಜ್ಜಿ ಉಜ್ಜಿ ಸಾಕಾಗಿ
ಅಲ್ಲಿ ಅಲ್ಲಿ ಮುಲಾಮುಗಳ
ರಾಶಿ ಎತ್ತರಕ್ಕೆ ಹಾರುವುದು
ಇತರ್‌ಗಳ ಚೆಲ್ಲುವುದು
ಕೊಳೆತದಲ್ಲಿ ಮತ್ತೆ
ಮೊಳಕೆಗಳ ರಾಶಿ
ಆಟದಲ್ಲಿ ಮೈಸೋತು
ಓಟದಲ್ಲಿ ಕಾಲುಕಿತ್ತು
ಚಂಡಿಯ ಹಾರ ಉಜ್ಜಿ
ಪ್ರೇತಗಳು ಹಾರಾಡಿ
ಸಿಕ್ಕಿದಲ್ಲಿ ಎಲ್ಲಾ
ಗಹಗಹಿಸಿ ಗ್ರಂಥಗಳ
ಮಧ್ಯ ಒದ್ದಾಡಿ
ಬಿಡುಗಡೆಗೆ ಚೆಲ್ಲುವುದು
ವಿಜ್ಞಾನ ರಾಶಿ

- ತಾಜ್

# ಕೈಕೆ ಕೇಡಿನ ಹುತ್ತವಲ್ಲ

ಒಂದು ವರ್ಗ 'ಇದು ಒಳ್ಳೆಯದು', 'ಇವರು ಸಭ್ಯರು' ಎಂದು ತೀರ್ಮಾನಿಸಿ ಬಿಡುತ್ತದೆ. ಅನಂತರ ಅವರ ಸುತ್ತ ಘಟನೆಗಳು ಹೆಣೆದುಕೊಳ್ಳುತ್ತ ಹೋಗುತ್ತವೆ. ಹತ್ತಾರು ಪಾತ್ರಗಳು ಸುತ್ತುವರಿಯುತ್ತವೆ. ಬಹುತೇಕ ಆ ಪಾತ್ರಗಳು ಕೇಂದ್ರ ಪಾತ್ರವನ್ನು ಮತ್ತಷ್ಟು ಗಟ್ಟಿಗೊಳಿಸಲು, ಹಲವು ಬಾರಿ ವೈಭವಿಸು ಪೋಷಕಗಳಾಗಿ ಕೆಲಸ ಮಾಡುತ್ತವೆ. ಈ ಪ್ರಕ್ರಿಯೆಯಲ್ಲಿ 'ಕೇಡು', ಕೇಡಿಗೆ ಕಾರಣರು ಎಂದುಕೊಂಡವರು ಕೂಡಾ ವಿಶೇಷ ಆಸ್ಥೆಯಿಂದ ರೂಪಿಸಲ್ಪಡುತ್ತಾರೆ. ಇವು ಕೂಡ ಕೇಂದ್ರ ಪಾತ್ರ-ವಸ್ತುವನ್ನು ವೈಭವಿಸಲೆಂದೇ ಸಿದ್ಧವಾಗಿರುತ್ತವೆ. ನಮ್ಮ ಅನೇಕ ಸೃಜನಶೀಲ ಕೃತಿಗಳಲ್ಲಿ ಅದರಲ್ಲೂ ಮಹಾಕೃತಿಗಳಲ್ಲಿ ಇಂಥದೊಂದು ನಿರಂತರ ಪ್ರಕ್ರಿಯೆ ಇದೆ.

ರಾಮಾಯಣ ಒಂದು ಮಹಾಕಾವ್ಯ. ಮಹಾಕಾವ್ಯಗಳು ಹುಟ್ಟುವುದೇ ಅಲ್ಲಿ. ಇಲ್ಲಿ ಚೆದುರಿ ಚಿತ್ತಾರಗಳಾಗಿ ಬೆಳೆಯುತ್ತಲೇ ಹೋದ ಒಂದನ್ನೊಂದು ಹೋಲುವ ಜನಪದ ಕಥೆಗಳನ್ನೆಲ್ಲ ಶಿಷ್ಟ ಸಾಹಿತ್ಯ ರಚನೆಯ ಕೌದಿಯಲ್ಲಿ ಸೇರಿಸಿ ಹೆಣೆಯುವ ಮೂಲಕ ಇಲ್ಲಿಯ ವಸ್ತು, ಪಾತ್ರಗಳು ಶಿಷ್ಟ ಸಮಾಜವು ಬಯಸುವ, 'ಶ್ರೇಷ್ಠ' ಮೌಲ್ಯಗಳನ್ನು ಪ್ರತಿಪಾದಿಸಲೆಂದೇ ಅನೇಕ ಮಾರ್ಪಾಡುಗಳನ್ನು ಹೊಂದಿರುತ್ತವೆ.

ಜನಪದ ಕತೆಯ ಪ್ರಕಾರ ದುಷ್ಟನಿಂದ ಅಪಹರಿಸಲ್ಪಟ್ಟು ಬಹುಕಾಲ ಬಂಧನದಲ್ಲಿದ್ದು ಬಂದಾಗ ಸ್ವೀಕರಿಸದೆ ಶಂಕಿಸಿದ ಪತಿಯ ಕಾರಣದಿಂದ ಚಿತೆಯೇರಿ ಭಸ್ಮವಾಗಿರಬಹುದಾದ ಹೆಣ್ಣೊಬ್ಬಳ ಕಥೆಯನ್ನು ಶಿಷ್ಟ ಸಮಾಜದ ಮೌಲ್ಯಗಳಿಗೆ ಹೊಂದುವಂತೆ ಕಡೆದಾಗ ಸೌಮ್ಯಳೂ, ಸುಶೀಲೆಯೂ, ಪತಿ ಪರಾಯಣೆಯೂ ಆದ 'ಸೀತೆ'ಯಾಗಿ ಅಗ್ನಿಯಲ್ಲಿ ಬಿದ್ದರೂ ಬೇಯದೆ ಮೇಲೆದ್ದು ಬರುವ ಪವಾಡ ಮೆರೆಯುತ್ತಾಳೆ. ಪವಿತ್ರವಾದದ್ದು ಬೆಂಕಿಗೆ ಬಿದ್ದರೂ ಬೇಯಕೂಡದು. ಸಾಂಕೇತಿಕವಾಗಿ ಈ ಮಾತಿನ ಧ್ವನಿ ಹಲವು ಆಯಾಮ ಪಡೆಯಬಹುದು. ಆದರೆ ವಾಸ್ತವದಲ್ಲಿ ಸಾಧ್ಯವಾದೀತೆ ? ಇವನ್ನೆಲ್ಲ ವಾಸ್ತವ ಎಂದು ನಂಬುವ, ಅಂಥ ಪರೀಕ್ಷೆಗಳಿಗೆ ಒಡ್ಡಿಬಿಡುವ ಮನೋಧರ್ಮದ ಜನರೂ ಇರುವಾಗ ಏನಾಗಬಹುದು ಒಂದು ಹೆಣ್ಣು ಮಗುವಿನ ಸ್ಥಿತಿ ? ಈಗೊಂದೆರಡು ದಿನದ ಹಿಂದೆ ಕಳ್ಳತನದ ಅಪವಾದ ಹೊರಿಸಿ ಹುಡುಗಿಯೊಬ್ಬಳನ್ನು ಕುದಿವ ಎಣ್ಣೆಯಲ್ಲಿ ಕೈಯಿಟ್ಟು ಪ್ರಮಾಣ ಮಾಡಿ ಸತ್ಯ ಸಾಬೀತು ಮಾಡು ಎಂದರೆಂದೂ, ಬೆಂದು ಹೋ ಕೈ ಪ್ರಜ್ಞಾಹೀನಳಾದ ಆಕೆ ನರಳುತ್ತ ಪ್ರಾಣಾಂತಿಕ ಸ್ಥಿತಿಯಲ್ಲಿದ್ದಾಳೆಂದೂ ಪತ್ರಿಕೆಯಲ್ಲಿ ಓದಿದ್ದು ಈ ಸಂದರ್ಭದಲ್ಲಿ ನೆನಪಾಗುತ್ತದೆ. ಎಲ್ಲವನ್ನೂ ಅವು ಇದ್ದ ಹಾಗೇ ಒಪ್ಪುವ ಅಗತ್ಯವಿಲ್ಲ. ಸಾಲುಗಳ ನಡುವೆ, ಮೌನದ ನಡುವೆ ಇರಬಹುದಾದ ಇನ್ನೊಂದು ಸತ್ಯವನ್ನು ಗುರುತಿಸಿಕೊಳ್ಳುವ ಮನಸ್ಸು ಬೇಕು.

ನಮ್ಮ ಚರ್ಚೆಗೆ ರಾಮಾಯಣದ ಕೈಕೆಯನ್ನು ತೆಗೆದುಕೊಳ್ಳೋಣ. ರಾಮನಂಥ ಪುರುಷೋತ್ತಮನನ್ನು ಕಾಡಿಗೆ ಕಳಿಸಿ, ಪತಿಯ ಸಾವಿಗೆ ಕಾರಣಳಾದ ಮಹಾಸ್ವಾರ್ಥಿ ಕೈಕೆ ಎಂಬುದು ಲೋಕದ ಕಣ್ಣಿಗೆ ಮೇಲ್ನೋಟಕ್ಕೆ ಕಾಣುವ ಚಿತ್ರ. ಕೈಕೆಯ 'ಕೆಡುಕು ಬುದ್ಧಿ' ಯ ಬಗ್ಗೆ ವಿವರಗಳನ್ನು ಆಕೆಯ ಜನ್ಮ ಜನ್ಮಾಂತರದ ಕಥೆಗಳಿಗೂ ಹಬ್ಬಿಸಲಾಗಿದೆ.

ಕೈಕೆ ರಾಜಪುತ್ರಿಯಾಗಿ ಜನಿಸುವ ಮುನ್ನ ಆಕೆ ಉದ್ದಾಲಕ ಮುನಿಯ ಹೆಂಡತಿ ಚಂಡಿಯಾಗಿದ್ದಳೆಂದೂ, ಹೇಳಿದುದಕ್ಕೆ ವ್ಯತಿರಿಕ್ತವಾದುದನ್ನೇ ಮಾಡಿ ಗಂಡನ ನಿತ್ಯಕರ್ಮಗಳಿಗೆ ವಿಪರೀತ ತೊಂದರೆ ಕೊಡುತ್ತಿದ್ದಳೆಂದೂ ಕಥೆಯಿದೆ. 'ಬೇಕು' ಎಂದಾಗ 'ಬೇಡ' ಎಂದು ಪ್ರತಿಯಾಗಿ ಹೇಳುವ ಮೂಲಕ ಕೆಲಸ ನಿರ್ವಹಿಸುತ್ತಿದ್ದ ಉದ್ದಾಲಕ ಪಿತೃಕರ್ಮದ ದಿನ 'ಪಿಂಡವನ್ನು ನದಿಗೆ ಹಾಕು' ಎಂದು ಸರಿಯಾಗಿ ಹೇಳಿಬಿಟ್ಟ. ಆಕೆ ಬೀದಿಗೆಸೆದಳು. ಸಿಟ್ಟಿಗೆದ್ದ ಗಂಡ 'ಶಿಲೆ' ಯಾಗು ಎಂದು ಶಪಿಸಿದ. ಅರ್ಜುನನ ಅಶ್ವಮೇಧದ ಕುದುರೆಯ ಪಾದ ಸೋಕಿದರೆ ಆಕೆಗೆ ಶಾಪ ವಿಮೋಚನೆ. ಈ ಚಂಡಿಯೆ ಅನಂತರ 'ಕಲಹೆ' ಎಂಬ ಬ್ರಾಹ್ಮಣ ಕನ್ಯೆಯಾಗಿ ಹುಟ್ಟಿದಳು. ಗಂಡನೆಂದರೆ ಲಕ್ಷ್ಯವಿಲ್ಲ. ಅವನಿಗಿಡದೆ ಎಲ್ಲವನ್ನೂ ತಾನೇ ಉಂಡು ಸುಖವಾಗಿರುತ್ತಿದ್ದಳು. ಗಂಡನಿಗೆ ರೇಗಿತ್ತು. ಇನ್ನೊಂದು ಮದುವೆ ಆಗಲು ಪ್ರಯತ್ನಿಸಿದ. ಕಲಹೆಯು ನೊಂದು ವಿಷ ಕುಡಿದು ಸತ್ತು, ಪಿಶಾಚಿಯಾಗಿ ತಿರುಗತೊಡಗಿದಳು.

ಒಮ್ಮೆ ಬ್ರಾಹ್ಮಣನೊಬ್ಬ ದೇವಚಾರ್ಚನೆಗೆ ಹೋಗುತ್ತಿದ್ದಾಗ ಆತನಿಗೆ ಈ ಪಿಶಾಚಿ ಕಾನಿಸಿಕೊಂಡಿತು. ಆತ ಹೆದರಿದ. ಕೈಯಲ್ಲಿದ್ದ ಪೂಜಾ ಪದಾರ್ಥಗಳು ಚೆಲ್ಲಿ ಹೋದವು. ಆಕಸ್ಮಾತ್ತಾಗಿ ಅವು ಪಿಶಾಚಿಗೆ ತಾಗಿದ್ದರಿಂದ ಅದು ರಾಕ್ಷಸಿಯ ಜನ್ಮ ತಳೆಯಿತು. ಈಗ ಗೋಳಿಡುತ್ತ ಆತನಲ್ಲಿ 'ಉದ್ಧಾರ ಮಾಡು' ಎಂದು ಪ್ರಾರ್ಥಿಸಿತು. ಕನಿಕರದಿಂದ ತಾನು ಗಳಿಸಿದ ಪುಣ್ಯದಲ್ಲಿ ಅರ್ಧಭಾಗವನ್ನು ಧಾರೆ ಎರೆದ ಬ್ರಾಹ್ಮಣ. ಆಕೆ ರಾಕ್ಷಸ ಜನ್ಮ ತ್ಯಜಿಸಿ ಪುಣ್ಯ ಭಾಗಮುಗಿವವರೆಗೆ ದಿವ್ಯ ಲೋಕ ಸೇರಿದಳು.

ಅನಂತರ ಆಕೆಯೇ ಕೇಕಯ ರಾಜನ ಮಗಳಾಗಿ ಜನಿಸಿದಳು. ಹಿಂದಿನ ಜನ್ಮದಲ್ಲಿ ಆಕೆಗೆ ತನ್ನ ಪುಣ್ಯವನ್ನು ಧಾರೆ ಎರೆದಿದ್ದ ಬ್ರಾಹ್ಮಣನೇ ದಶರಥನಾಗಿ ಜನಿಸಿದ್ದ. ಆತನ ಕೈಹಿಡಿದಳು ಈ ಕೈಕೆ.

ಇದಿಷ್ಟು ಆಕೆಯ ಜನ್ಮಾಂತರ ಕತೆಯಾದರೆ ಕೈಕೆಯಾದ ಮೇಲೂ ಈಕೆಯ ಸುತ್ತ ಕಥೆಗಳು ಕಟ್ಟಿಕೊಂಡಿವೆ. ದಶರಥನ ಮೂರನೆಯ ಹೆಂಡತಿ, ಚೆಲುವೆ, ಯುವತಿ. ಇಂದ್ರನನ್ನು ಪೀಡಿಸುತ್ತಿದ್ದ ಒಬ್ಬ ರಾಕ್ಷಸನನ್ನು ಕೊಲ್ಲಲು ದಶರಥನು ಯುದ್ಧಕ್ಕೆ ಹೊರಟ. ಅವನೊಂದಿಗೆ ಕಿರಿಯ ಹೆಂಡತಿ ಕೈಕೆಯೂ ಇದ್ದಳು. ವೃದ್ಧ ದಶರಥ ಯುದ್ಧದಲ್ಲಿ ಶತೃವಿನ ಬಾಣದ ಹೊಡೆತದಿಂದ ಎಚ್ಚರ ತಪ್ಪಿದ. ರಥವನ್ನು ತಾನೇ ನಡೆಸಿಕೊಂಡು ಅಪಾಯವಿಲ್ಲದ ಸ್ಥಳಕ್ಕೆ ಕೊಂಡೊಯ್ದಳು ಕೈಕೆ. ಆಕೆ

ಕೇಳಿದ ಎರಡು ಬೇಡಿಕೆ ತೀರಿಸುತ್ತೇನೆಂದ ದಶರಥ. ಕೈಕೆ ಏನನ್ನು ಬೇಡಲಿಲ್ಲ (ಕೈಕೆ ಕಳಚಿಹೋದ ರಥದ ಕೀಲಿ ಗಾಲಿ ಕೀಲಿಗೆ ಬದಲಾಗಿ ತನ್ನ ಕೈಯನ್ನೇ ಕೊಟ್ಟು, ಯುದ್ಧದಲ್ಲಿ ನಿರತನಾದ ದಶರಥನಿಗೆ ನೆರವಾದಳೆಂದೂ ಹೇಳುವುದುಂಟು).

ಮುಂದೆ ಮೂರು ಹೆಂಡತಿಯರಿದ್ದರೂ ಮಕ್ಕಳಾಗದ ದಶರಥ ಪುತ್ರಕಾಮೇಷ್ಠಿಯಾಗ ಮಾಡಿದ. ಯಜ್ಞಪುರುಷನು ಪಾಯಸಕೊಟ್ಟ. ದಶರಥ ಮೂವರಿಗೂ ಹಂಚಿದ. ಅದನ್ನು ಸೇವಿಸುವಷ್ಟರಲ್ಲಿ ಕೈಕೆಗೆ ಬಂದ ಆಪತ್ತು ನೋಡಿ, ಯಾರೋ ಶಾಪಗ್ರಸ್ತ ಅಪ್ಸರಸ್ತ್ರೀ ಹದ್ದಿನ ರೂಪದಲ್ಲಿ ಬಂದು ಕೈಕೆಯ ಕೈಯಲ್ಲಿದ್ದ ಪಾಯಸವನ್ನು ಕಿತ್ತುಕೊಂಡು ಹೋಗಿ ಅಂಜನಾದೇವಿಗೆ ಕೊಟ್ಟಿತಂತೆ. ಆನಂತರ ಅದಕ್ಕೆ ಶಾಪ ವಿಮೋಚನೆ ಆಯಿತು. ಆದರೆ ಕೈಕೆಯ ಗತಿಯೇನು ? ದಶರಥನ ಹಿರಿಯ ಹೆಂಡತಿಯರಾದ ಕೌಶಲ್ಯೆ, ಸುಮಿತ್ರೆಯರು ತಮ್ಮ ಪಾಲಿನ ಪಾಯಸದಲ್ಲಿ ಅರ್ಧರ್ಧ ತೆಗೆದುಕೊಟ್ಟರು. ಆನಂತರ ಹುಟ್ಟಿದವರೇ ಭರತ, ಶತ್ರುಘ್ನ, ರಾಮ, ಲಕ್ಷ್ಮಣರು ಇತ್ಯಾದಿ ಎಲ್ಲರಿಗೂ ತಿಳಿದ ಸಂಗತಿ.

ಕೈಕೆಯ ಬಗ್ಗೆ ಇನ್ನೊಂದು ಪ್ರಸಂಗವೂ, ಇದೆ. ಅದು ಅವಳ ತಾಯಿಯ ಸುತ್ತ ಹಬ್ಬಿದೆ. ಕೇಕೆಯ ರಾಜ ಅಶ್ವಪತಿಯು ಪತ್ನಿಯೊಡನೆ ಏಕಾಂತದಲ್ಲಿದ್ದಾಗ ಏಕೋ ತನ್ನೊಳಗೇ ನಕ್ಕುಬಿಟ್ಟ. ಏಕೆಂದು ಕೇಳಿದ ಹೆಂಡತಿಗೆ 'ಆ ರಹಸ್ಯ ಹೇಳಿದರೆ ನಾನು ಸಾಯುತ್ತೇನೆ' ಎಂದ. 'ನೀನು ಸತ್ತರೂ ಅಡ್ಡಿಯಿಲ್ಲ, ರಹಸ್ಯ ಹೇಳು' ಎಂದು ಅರಸಿ ಹಟ ಮಾಡಿದಳು. ಅಂಥ ಹೆಂಡತಿಯೇ ಬೇಡವೆಂದು ಅವಳನ್ನು ಬಿಟ್ಟೇ ಬಿಟ್ಟ ಕೇಕೆಯ ರಾಜ. ಅಂತ ರಾಯಿಯ ಮಗಳಾದ ಕೈಕೆ ಮುಂದೆ ಗಂಡನ, ಸಾವಿಗೆ ಕಾರಣಳಾದಳು.

ಇಷ್ಟು ಕಥೆಗಳು ಕೈಕೆಯನ್ನು ಕುರಿತಾಗಿ ಇವೆ. ಒಂದೊಂದು ಕತೆಯೂ ವ್ಯಕ್ತಿತ್ವವೊಂದನ್ನು ಕೇಡಿನ ಸುಳಿಯಲ್ಲೇ ಕಟ್ಟುತ್ತ ಹೋಗಿದೆ ಎಂಬುದನ್ನು ಗಮನಿಸಿ.

ಚಂಡಿ, ಕಲಹೆಯರಿಂದ ಕೈಕೆಯಾಗುವ ವರೆಗೆ ಎಲ್ಲವೂ ಒಂದು ಗೊತ್ತಾದ ಸ್ವಭಾವಕ್ಕೆ ಪೂರಕವಾಗಿರುವ ಅಂಶಗಳೇ ಆಗಿವೆ. ಈ ಹಂತದಲ್ಲಿ ಅವಳ ತಾಯಿಯೂ ಕೂಡ ಎಷ್ಟು ಕಠಿಣ ಹೃದಯದವಳು ಎಂದು ಹೇಳಲಾಗಿದೆ.

ಚಂಡಿಯ ಹಟಮಾರಿತನಕ್ಕೆ ಇರಬಹುದಾದ ಕಾರಣ ಹುಡುಕುವ ಪ್ರಯತ್ನವಿಲ್ಲ. ಪರಿಹಾರ ಕೂಡ ರೋಗ ನಿಧಾನಕ್ಕಿಂತ ಕ್ಷಣಿಕ ತೀರ್ಮಾನದ್ದಾಗಿದೆ. ಅಂತಿಮವಾಗಿ ಶಿಲೆಯಾಗುವ ಶಿಕ್ಷೆ, ಇದನ್ನು ರೋಗದ ಚರಮ ಸ್ಥಿತಿಯಾದ ರಿಜಿಡಿಟಿ ಎಂದೂ ಭಾವಿಸಬಹುದು. ಆಳುವ ದೊರೆಯಿಂದ ಅಲ್ಲ, ಅವನೇರಿದ ಕುದುರೆಯ ಪದಾಘಾತದಿಂದ ಚೇತರಿಕೆ ! (ಇದಕ್ಕೆಲ್ಲ ಮನಶ್ಶಾಸ್ತ್ರದ ರೀತ್ಯಾ ವೈಜ್ಞಾನಿಕ ಅರ್ಥ ಗಳುಮಟು)

'ಕಲಹೆ'ಯಾದಾಗಲೂ ಅವಳ ಸ್ಥಿತ್ಯಂತರಗಳನ್ನು, ಅದಕ್ಕೆ ಕಾರಣಗಳನ್ನು ಗಮನಿಸಿ. ಗಂಡನಿಗೆ ಕೊಡುವ ಮೊದಲು ಉಂಡುದೇ ಅಪರಾಧವಾಗಿ ಪಿಶಾಚಿ ಆಗುವುದಾಗಲೀ, ಯಾರದೋ ಪುಣ್ಯ ಪಡೆದು ದಿವ್ಯಲೋಕ ಸೇರಿದ್ದರ ಕಾರಣ ಮತ್ತೆ ಜನಿಸಿ ಅವನ ಮೂರನೇ ಹೆಂಡತಿ ಆದದ್ದು. (ಬ್ರಾಹ್ಮಣನೇ ದಶರಥನಲ್ಲವೆ?) ಮಕ್ಕಳಿಲ್ಲದ, ವೃದ್ಧರಾಜನ ಚಿಕ್ಕ ಪ್ರಾಯದ ಹೆಂಡತಿ. ಆದಾಗಲೇ ಇಬ್ಬರು ಸವತಿಯರಿದ್ದಾರೆ.

ಮುಂದೆ ಪಾಯಸ ಸೇವನೆ ಸಹ ಅವಳಿಗೆ ಬಹಳ ಪ್ರಿಯವಾದ ಸಂಗತಿಯೇನಲ್ಲ. ಆದ್ದರಿಂದಲೇ ಹದ್ದು ಹಾರಿಸಿಕೊಂಡು ಹೋದರೂ ಅತ್ತ ಲಕ್ಷ್ಯವಿಲ್ಲ. ಪ್ರಾಯದ ಹುಡಿಗಿಗೆ ಬೇಕಾದದ್ದು ಪಾಯಸವಾಗಿರಲಾರದು. ಬೇಕಾದ್ದನ್ನು ದಶರಥ ಕೊಡುವುದಂತೂ ಸಾಧ್ಯವಿಲ್ಲವಷ್ಟೇ....

ಆದರೆ ಕೈಕೆ ಸುಖಿಯಾಗಿದ್ದಾಳೆ ? ಅಥವಾ ಇಂಥ ಪ್ರಶ್ನೆಗಳೇ ಎತ್ತಬಾರದವು? ಕೈಕೆ ಸನ್ಯಾಸಿಯಂತೂ ಅಲ್ಲವಲ್ಲ. ಅವಳ ಒಳಗೇ ಇದ್ದಿರಬಹುದಾದ ಬಯಕೆಗಳಿಗೆ ಬೆಳಕೇ ಹಿಡಿಯಲಿಲ್ಲ ಯಾರೂ....

ಅವಳು ಮಕ್ಕಳೊಂದಿಗೆ ಹೆಚ್ಚು ಸಮಯ ಕಳೆದಳು. ಅವಳಿಗೆ ರಾಮನೆಂದರೆ ಹೆಚ್ಚು ಪ್ರೀತಿ ! ಅಂಥವಳು ಏಕೆ ದಶರಥನಲ್ಲಿ ತನ್ನ ಮಗನಿಗೇ ಪಟ್ಟವಾಗಲಿ ಎಂದು ಒತ್ತಾಯಿಸಿರಬಹುದು ? ಪ್ರಚಲಿತವಿರುವ ಕಾರಣಗಳಿಗಿಂತ ಬೇರೆಯಾದ್ದು ಇನ್ನೇನೊ ಇರಲಾರದೆ ? ಆಕೆ ತನ್ನ ಭವಿಷ್ಯತ್ಕಾಲದ ಬಗ್ಗೆ ಏನು ಯೋಚಿಸಿರಬಹುದು ? ಮಂಥರೆಯ ಚಾಡಿ ಮಾತು ಇತ್ಯಾದಿ ಕಥೆಗಳು ಏನೇ ಇರಲಿ, ಕೈಕೆ ಸ್ವತಂತ್ರವಾಗಿ ಯೋಚನೆ ಮಾಡಲಾಗದಷ್ಟು ದುರ್ಬಲೆಯಲ್ಲ. ರಥವನ್ನು ನಡೆಸಿ ವೃದ್ಧ ಪತಿಯನ್ನು ರಕ್ಷಿಸಿದವಳಿಗೆ ಹಿತ್ತಾಳೆ ಕಿವಿಯಾಗುವ ಪ್ರಮೇಯವೇ ಇಲ್ಲ.

ಅಂದು ಬೇಕಾದ್ದು ಕೊಡುವೆನೆಂದಾಗ ಒಲ್ಲೆನೆಂದವಳು ಅಂಥ ಮಾತನ್ನು ಪುನಃ ಪ್ರಸ್ತಾಪಿಸಿ ಅವನ ಮಾತಿನಲ್ಲೇ ಅವನನ್ನು ಸಿಕ್ಕಿ ಹಾಕಿಸುವುದರ ಹಿಂದೆ ಕೈಕೆಯ ಮನಸ್ಸು ಹೇಗೆ ಕೆಲಸ ಮಾಡಿದೆ ? ದಶರಥನಿಲ್ಲದ ರಾಜ್ಯದಲ್ಲಿ ತನ್ನ ಮಕ್ಕಳ ಸ್ಥಿತಿ ಏನಾಗಬಹುದೆಂದು ಕಲ್ಪಿಸಿದಳೊ.... ಸ್ವಲ್ಪ ಮಟ್ಟಿನ ಅಧಿಕಾರ ಸ್ವಾತಂತ್ರ್ಯ ಇಲ್ಲವಾದರೆ ತಮ್ಮ ಶೇಷಾಯುಷ್ಯ ದುರಂತವಾಗಬಹುದೆಂಬ ಆಲೋಚನೆಯೂ ಬಂದಿರಬಹುದು. ಈ ಎಲ್ಲ ಹಿನ್ನೆಲೆಯಲ್ಲಿ ಆಕೆ ತನ್ನು ಮಗನಿಗೆ ಪಟ್ಟಾಭಿಷೇಕವಾಗಲಿ ಎಂದು ಬಯಸಿದ್ದರ ಹಿಂದೆ ಮಕ್ಕಳ ಸುರಕ್ಷತೆ, ಸ್ಥಾನಮಾನಗಳಿಗಾಗಿ ತುಡಿಯುವ ತಾಯ್ತನೇ ಇದೆ.

ಸರಿಯಾದ ಅರ್ಥದಲ್ಲಿ ವಿವರಿಸಿ ಹೇಳಲಾಗದ ದಶರಥ ಕಿರಿಯ ರಾಣಿಯನ್ನು ಒಪ್ಪಿಸಿಕೊಳ್ಳಲಾರದಾದ. ಅಲ್ಲಿಯೂ ಅವನನ್ನು ಕಾಡಿದ್ದು ಮೋಹ, ಅದಕ್ಕೂ ಮಿಗಿಲಾದ ಅಸಹಾಯಕತೆ ಅಲ್ಲವೆ? ದಶರಥನಿಗೆ ಕಿರಿಯ ಪ್ರಾಯದ ಹೆಂಡತಿಗೆ ಯಾವ ರೀತಿಯಲ್ಲೂ ಸುಖ ನೀಡಲಾಗದ ತನ್ನ ಅಶಕ್ತತೆಯೇ ಕಾಡಿರಬಹುದಲ್ಲವೆ? ಅಂಥ ಕಾರಣ, ಬಿಡದ ಮೋಹ ಅವನು ವಿಚಕ್ಷಣೆಯನ್ನು ಕಳೆದುಕೊಳ್ಳಲು ಕಾರಣವಾಗಿರಬಹುದು.

ನಾವು ಹೆಣ್ಣು ಮಕ್ಕಳೆಲ್ಲ ಒಳ್ಳೆಯುವರೆಂಬ ತೀರ್ಮಾನ ತೆಗೆದುಕೊಳ್ಳಬೇಕಿಲ್ಲ. ಆದರೆ ಒಂದು ಕ್ರಿಯೆಯ ಹಿಂದು ಮುಂದನ್ನು ತರ್ಕಬದ್ಧವಾಗಿ ಚಿಂತಿಸಿ ನಿರ್ಣಯಿಸುವ ಅಗತ್ಯವಿದೆ.

ಗಿರೀಶ್ ಕಾರ್ನಾಡರು ಬರೆದ 'ಮಾನಿಷಾದ' ನಾಟಕದಲ್ಲಿ ಆಗಸನ ಮಾತೇ ಪ್ರಧಾನವಾಗಿ ಸೀತೆಯನ್ನು ಕಾಡಿಗೆ ಕಳಿಸುವ ಪ್ರಸಂಗದಲ್ಲಿ ಆಗಸ ಭರತನಲ್ಲಿ ತಾನು ಆಡಿದ ಮಾತು ಹೀಗೆ ಪರ್ಯವಸನಗೊಂಡಿದ್ದರ ಬಗ್ಗೆ ನೊಂದು ಹೇಳಿಕೊಂಡಾಗ ಭರತ, 'ನೀನಲ್ಲದಿದ್ದರೆ ಮತ್ತಾವುದಾದರೂ ಕಾರಣ ಸಿಗುತ್ತಿತ್ತು, ಸೀತೆಯನ್ನು ಕಾಡಿಗೆ ಕಳಿಸಲು ಎಂಬ ಮಾತನ್ನು ಹೇಳುತ್ತಾನೆ. ಇಲ್ಲಿಯೂ ಕೈಕೆಯ ಕೋರಿಕೆಯಲ್ಲದಿದ್ದರೆ, ರಾಮನ ಕಾನಾಭಿಮುಖ ಪ್ರಯಾಣಕ್ಕೆ ದಶರಥನ ಮರಣಕ್ಕೆ ಮತ್ತಾವುದಾದರೂ ಕಾರಣ ಸಿಗುತ್ತಿತ್ತು. ಇಂಥಲ್ಲಿ ಒಬ್ಬ ತಾಯಿಯಾಗಿ ಕೈಕೆಯ ವರ್ತನೆಯನ್ನು ಗ್ರಹಿಸುವುದು ಮುಖ್ಯ. ಪತಿಯ ಸಾವಿಗೆ ಕಾರಣಳಾದವಳು ಎಂಬ ಅಪವಾದ ಹೊರಿಸುವ ಅದಕ್ಕೆ ಪೂರಕವಾಗುವಂತೆ ಮೇಲೆ ಹೇಳಿದ. ಜನ್ಮಾಂತರದ ಕತೆಗಳ ಮೂಲಕ ಅವಳ ಸುತ್ತ 'ಕೇಡ'ನ್ನು ಕಟ್ಟುವ ಮನಸ್ಸುಗಳ ಕ್ರೌರ್ಯ ಏನೆಂಥದು ? ಅದರಲ್ಲೂ ಕೈಕೆಯ ತಾಯಿಯ ಚಿತ್ರಣ, ಅಂಥ ತಾಯಿಯ ಮಗಳಾದ್ದರಿಂದ ಕೈಕೆಯೂ ಕೇಡಿನ ಪ್ರತೀಕ ಎಂಬ ತೀರ್ಮಾನ ವಿವೇಚನೆಯಿಂದ ಕೂಡಿದ್ದು ಎಂದು ಹೇಳಲಾದೀತೆ ? (ಉತ್ತರ ರಾಮಾಯಣದ ಚಿತ್ರಪಟ ಪ್ರಸಂಗಕ್ಕೂ ಕೈಕೆಯನ್ನೇ ಗುರಿ ಮಾಡುತ್ತದೆ, 'ಪುರಾಣ ನಾನು ಚುಡಾಮಣಿ' ಯ ವಿವರಗಳು).

ಮನಷ್ಯರಲ್ಲಿ ಸಹಜವಾಗೇ ಹಲವು ಸ್ವಭಾವಗಳಿವೆ. ಅವು ಸಂದರ್ಭಾನುಸಾರ ವಿಜೃಂಭಿಸುತ್ತವೆ. ಅನೇಕ ಮಾತು - ಕ್ರಿಯೆಗಳಿಗೆ ಪ್ರೇರಕವಾಗುತ್ತವೆ. ಎಲ್ಲಕ್ಕೂ ಕಾರ್ಯ-ಕಾರಣ ಸಂಬಂಧವಿರುತ್ತದೆ. ತರ್ಕಶುದ್ಧವಾದ ನೋಟ ಮುಖ್ಯ. ರಾಮನನ್ನು ಕಾಡಿಗೆ ಕಳಿಸಿದ ಸ್ವಾರ್ಥಿ, ಗಂಡನನ್ನು ಕೊಂದುಕೊಂಡ ಪಾಪಿ ಎಂಬ ಪಟ್ಟಕ್ಕಿಂತ ಬೇರೆಯಾಗಿಯೂ ಕೈಕೆಯನ್ನು ನೋಡುವುದು ಸಾಧ್ಯವಿಲ್ಲವೆ ? ಪುರಾಣದ ಕಥೆಗಳನ್ನೇ ನಂಬಿ ಹೇಳಬಹುದಾದರೆ ಈ ಎಲ್ಲ ಕಥಾ ಭಾಗ, ಪಾತ್ರಗಳ ಪ್ರವೃತ್ತಿಗೆ ದಶರಥನಿಗಿದ್ದ ಶಾಪದಿಂದಾರಂಭಿಸಿ ಹಲವು ಕಾರಣಗಳು ಇವೆ ಎಂಬುದನ್ನು ಗೌಣ ಮಾಡಿ 'ಕೈಕೆ' ಎಂದರೆ ಕೇಡು ಎಂದೇ ಪರಿಭ್ರಮಿಸುವುದೇಕೆ ? ಅವಳ ಕೋರಿಕೆ ಒಂದು ಹೆಣ್ಣು - ಒಬ್ಬ ತಾಯಿ ಬಯಸಬಾರದಂಥ ಬಯಕೆಯೇನೂ ಆಗಿರಲಿಲ್ಲ. ಅವಳಿಗೆ ಅರ್ಥ ಮಾಡಿಸಲಾರದ ದಶರಥನ ದೌರ್ಬಲ್ಯವೇಕೆ ಆಕ್ಷೇಪಾರ್ಹವಲ್ಲ?

# ನೆಯ್ದ ಮಲ್ಲಿಗೆಯ ಜಡೆ

ಬಿಳಿಬಟ್ಟೆಯ ಮೇಲೆ
ಶಾಯಿ ಚೆಲ್ಲಿ
ತೂಗಿ ಬಿಟ್ಟಿತು
ನೆಯ್ದ ಮಲ್ಲಿಗೆ
ಜಡೆ

ಅಂಬೆಕಾಲಿಟ್ಟ ಪುಟ್ಟಕಂದ
ಚೆಲ್ಲಿದ ಶಾಯಿಗು ಬಂತು
ಅಂದ

ಸುರಿಯುವ ಮಳೆಯಲ್ಲೂ
ಜೋಗುಳದ ಹಾಡು
ಮೆಲ್ಲ ಮೆಲ್ಲನೇ
ತೇಲಿಸಿತು ನೆಯ್ದು ಮಲ್ಲಿಗೆ
ಜಡೆ
ಹಕ್ಕಿಗಳು ನಕ್ಕಿತು
ಗೂಡಿಲ್ಲ ನಿನಗೆ
ಬಿದ್ದಿದ್ದ ಕೊಳಕು
ಹುಳುಗಳು ಕೊರೆಯಿತು
ಅಲ್ಲಿ ಅದರದೇ ಒತ್ತಿ
ಹೊಡೆಯಿತು ಎಣ್ಣೆ
ತಿಕ್ಕಿದಲ್ಲಿ ಹೊಳೆಯಿತು
ತುಂಬು ಹಣ್ಣಿನ ಗೊನೆ
ತಾಂಬೂಲದ ಜೊತೆ ಇಟ್ಟರು
ಗೊನೆ
ಮತ್ತೆ
ಬಿಳಿ ಬಟ್ಟೆಯ ಮೇಲೆ
ಶಾಯಿ ಚೆಲ್ಲಿ
ತೂಗಿ ಬಿಟ್ಟಿತು
ನೆಯ್ದ ಮಲ್ಲಿಗೆ
ಜಡೆ

ತಾಜ್.
ಬೆಂಗಳೂರು

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067